**IN THE COURT OF JOINT REGISTRAR OF CO-OPERATIVE SOCIETIES (U/R 441) ARBITRATION CELL, KARNATAKA URBAN BANK FEDERATION LTD., NO.132, 2ND FLOOR, K.H. ROAD, BANGALORE-560027**

**DISPUTE NO.OLD A(I&M)/DIS/D2/5852/2003-2004**

**DISPUTE NO. JRD/UBF/1442/2004-2005**

**PETITIONER**

Amanath Co-operative Bank Ltd.,
No.43, Hospital Road,
Shivajinagar, Bangalore-560001
Represented by its General
Manager (A)

**RESPONDENT**

1) M.S. H.S.R. Constructions
No.3/2, Al-Ameen Appartments, II Floor, Patalamma Street, Basavangudi, Bangalore-560004.
2) H.V. Abdul Wahab S/o Habeeb Dastagir Sab, Major,
3) Sirajunissa D/o Abdul Wahab Major,
both residing at No. 1692, 13th Crosss, Govindapura, Main Road, Arabic College Post, Bangalore-560045.
4) Akram Khan S/o Ismail Khan, Major
No.3/2, Al-Ameen Appartments, II Floor, Patalamma Street, Basavangudi, Bangalore-4
5) Chandra Mouli Reddy S. S/o A.L. Subbaiah Reddy, Major, Residing at H.S.R. Layout, I Sector, Shivaram Reddy Garden, Bangalore.

**CONFIRMATION OF ORDER OF ATTACHMENT BEFORE JUDGEMENT DATED 20TH DECEMBER 2003 OF IMMOVABLE PROPERTIES UNDER SECTION 103 OF THE KARNATAKA CO-OPERATIVE SOCIETIES ACT 1959**

1. Whereas the Petitioner Bank has filed the above dispute before the additional Registrar of Co-operative Societies (Industries and Miscelleneous) office of the Registrar of Co-operative Societies under Section 70 of the Karnataka Co-operative Societies Act 1959 for the Recovery of a sum of Rs 81,64,138=45 along with future interest at the rate of 17.5% P.A. and 2% Penal interest from 30/11/2003 till the date of realisation from the Respondents.

2. Whereas the petitioner has also filed an application Under Section 103 of Karnataka Co-operative Societies Act 1959 to pass an Order of Attachment Before Judgement / Award attaching the Schedule Property pending disposal of the above dispute along with the affidavit.

3. Whereas the Additional Registrar of Co-oprative Societies (Industries and Miscelleneous) has fully convinced that disposal of the Schedule property of the Respondents as mentioned in the said order would defeat or delay the enforcement of execution of any order / decree that may be passed against the Respondents and by order dated 20/12/2003 has ordered the conditional attachment of the movable/ immovable propertied of the Respondents as mentioned in the schedule of the said order.

4. Whereas the Additional Registrar of Co-operative Societies (Industries and Miscelleneous) has also given notice to the Respondents that, if they desire to raise the condional attachment they should furnish cash security to the extent of Rs.82,00,000=00 (Rupees Eighty two lakh only) by depositing the said amount in the Petitioner Co-operative Bank in the name of the Additional Registrar of Co-operative Societies (Industries and Miscelleneous) Bangalore under suspense acoount and to produce the original reciept /challan on or before 19/01/2004.

5. Whereas the Respondents have also been informed that if they fail to furnish the cash security as ordered above within the stipulated period, the conditional attachment will be confirmed as made absolute.

6. Whereas the Additional Registrar of Co-operative Socities (Industries and Miscelleous) in the meanwhile has transferred this dispute to this authority as per the Government Notification No. CMW/ 191/CLM-2004 (PART-1) DATED 02/02/2005

7. Whereas it is confirmed that the notice of the conditional Attachment Before Judgement Order are served on the Respondents but they have not remitted the amount nor produced security as stipulated in the attachment Before Judgement order dated 20/12/2003. It is therefore felt necessary to confirm the order dated 20/12/2003 and is made absolute.

8. In the above circumstances the following order is passed.

**ORDER**

Under the circumstances explained above and in excercise of the powers vested in me Under Section 103 of Karnataka Co-operative Societies Act 1959 as conferred by the Government Notification No.CMW/191/CLM-2004 (PART-1) DATED 02/02/2005. I.R.M. Natraj Jiont Registrar of Co-operative Societies (U/r 441) Arbitration Cell, Karnataka State Urban Co-operative Banks Federation Ltd., Bangalore. do hereby order that the conditional attachment of the Scheduled Properties of the order dated 20/12/2003 passed in dispute No. A(I&M) /DIS/D2/5852/2003-2004, is confirmed as made absolute.
Given under my hand and seal this day the 5th of August 2005.

Joint Registrar of Co-operative Societies
U/r 441, Arbitration Cell
P.R. 1727 Karnataka State Co-operative Urban Banks Federation Ltd., Bangalore.

**ಕಂದಾಯ ಇಲಾಖೆ**

**ಅಧಿಸೂಚನೆ ಸಂಖ್ಯೆ: ಕಂಇ 108 ಎಲ್‌ಆರ್‌ಎಂ 2005, ದಿನಾಂಕ: 27ನೇ ಅಕ್ಟೋಬರ್ 2005**

ಶ್ರೀ ಎಸ್.ಎ.ದಾತಾರ್, ಛೇರ್ಮನ್, ಹರಿಪ್ರಿಯ ಶುಗರ್ಸ್ ವರ್ಕ್ಸ್ ಲಿಮಿಟೆಡ್, ಅಥಣಿ ಇವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 116 ಎಲ್‌ಆರ್‌ಎಂ 2000 ದಿನಾಂಕ 30.9.2000 ರಲ್ಲಿ ಆಥಣಿ ತಾಲ್ಲೂಕು, ಕೊಕಟನೂರು ಗ್ರಾಮದ ರಿ.ಸ.ನಂ.376/2 ರಲ್ಲಿ 9-00 ಎಕರೆ, 377/2 ರಲ್ಲಿ 8-00ಎಕರೆ, 377/1 ರಲ್ಲಿ 6-00 ಎಕರೆ, 378 ರಲ್ಲಿ 20-29 ಎಕರೆ, 382/1ಎ ರಲ್ಲಿ 5-00 ಎಕರೆ, 383 ರಲ್ಲಿ 18-38 ಎಕರೆ, 384 ರಲ್ಲಿ 14-28 ಎಕರೆ, 385/1 ರಲ್ಲಿ 10-28 ಎಕರೆ, 392/1 ರಲ್ಲಿ 11-20 ಎಕರೆ ಹೀಗೆ ಒಟ್ಟು 104-23 ಎಕರೆ ಜಮೀನನ್ನು ಸಕ್ಕರೆ ಕಾರ್ಖಾನೆ ಹಾಗೂ 25 ಎಂ.ಡಬ್ಲ್ಯು. ಕೋ-ಜನರೇಶನ್ ಪ್ರಾಜೆಕ್ಟ್ ಸ್ಥಾಪಿಸುವ ಉದ್ದೇಶಕ್ಕಾಗಿ ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ಅಡಿ ಕೆಲವು ಷರತ್ತುಗಳನ್ನು ವಿಧಿಸಿ ಖರೀದಿಸಲು ಅನುಮತಿ ನೀಡಲಾಗಿದೆ. ಸದರಿ ಜಮೀನನ್ನು ಹರಿಪ್ರಿಯ ಶುಗರ್ಸ್ ವರ್ಕ್ಸ್ ಲಿಮಿಟೆಡ್ ರವರಿಂದ ಶ್ರೀ ರೇಣುಕಾ ಶುಗರ್ಸ್ ಲಿಮಿಟೆಡ್ ರವರು ಖರೀದಿಸಲು ಕರಾರುಪತ್ರ ಮಾಡಿಕೊಂಡಿದ್ದು ಹಸ್ತಾಂತರಿಸಲು ಒಪ್ಪಂದ ಮಾಡಿಕೊಂಡಿರುತ್ತಾರೆ.

ಶ್ರೀರೇಣುಕಾ ಶುಗರ್ಸ್ ಲಿಮಿಟೆಡ್ ರವರು ನಿಯೋಜಿತ 5000 ಟಿ.ಸಿ.ಡಿ. ಸಕ್ಕರೆ ಕಾರ್ಖಾನೆ ಹಾಗೂ 25 ಎಂ.ಡಬ್ಲ್ಯು. ಕೋ ಜನರೇಶನ್ ಪ್ರಾಜೆಕ್ಟ್ ಸ್ಥಾಪಿಸುವ ಉದ್ದೇಶಕ್ಕಾಗಿ ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ಅಡಿ ವಿನಾಯಿತಿ ನೀಡುವ ಬಗ್ಗೆ ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ.

ಬೆಳಗಾವಿ ಜಿಲ್ಲೆ, ಅಥಣಿ ತಾಲೂಕಿನ ಒಟ್ಟು 104 ಎಕರೆ 23ಗುಂಟೆ ವಿಸ್ತೀರ್ಣದ ಜಮೀನನ್ನು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961 ಕಲಂ 109(1)(i) ರ ಪ್ರಕಾರ 2000 ನೇ ಇಸವಿಯಲ್ಲಿ ಹರಿಪ್ರಿಯ ಶುಗರ್ಸ್ ವರ್ಕ್ಸ್ ಲಿಮಿಟೆಡ್ ಪರವಾಗಿ ಸರ್ಕಾರದಿಂದ ಖರೀದಿ ಪ್ರಸ್ತಾವನೆಗೆ ಮಂಜೂರಾತಿ ನೀಡಲಾಗಿದೆ. ಮಂಜೂರಾತಿಯ ಷರತ್ತಿನಲ್ಲಿ ಎರಡು ವರ್ಷಗಳ ಒಳಗಡೆ ಪ್ರಸ್ತಾಪಿತ ಜಮೀನನ್ನು ನಿಗದಿತ ಉದ್ದೇಶಕ್ಕೆ ಅಂದರೆ ಸಕ್ಕರೆ ಕಾರ್ಖಾನೆ ಹಾಗೂ ವಿದ್ಯುತ್ ಘಟಕವನ್ನು ಸ್ಥಾಪಿಸಲು ಷರತ್ತು ವಿಧಿಸಲಾಗಿತ್ತು. ಆದರೆ ಕಾರಣಾಂತರಗಳಿಂದ ಸದರಿ ಸಂಸ್ಥೆಯು ಈ ಉದ್ದೇಶಕ್ಕೆ ಪ್ರಸ್ತಾಪಿತ ಜಮೀನನ್ನು ಬಳಸಿಕೊಳ್ಳದೇ ಇರುವುದು ದಾಖಲಾತಿಗಳಿಂದ ಕಂಡುಬರುತ್ತದೆ. ಪ್ರಸ್ತುತ ಅದೇ ಜಮೀನಿನಲ್ಲಿ ಶ್ರೀ ರೇಣುಕಾ ಶುಗರ್ಸ್ ಲಿಮಿಟೆಡ್, ಬೆಳಗಾವಿ ಇವರು ತಮ್ಮ 4ನೇ ಸಕ್ಕರೆ ಕಾರ್ಖಾನೆ ಮತ್ತು ವಿದ್ಯುತ್ ಘಟಕವನ್ನು ಸ್ಥಾಪಿಸಲು ಸದರಿ ಜಮೀನನ್ನು ಖರೀದಿಗಾಗಿ ಸರ್ಕಾರದ ಅನುಮೋದನೆಯನ್ನು ಕೋರಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಸರ್ಕಾರದಿಂದ ಈ ಹಿಂದೆ ಯಾವ ಉದ್ದೇಶಕ್ಕಾಗಿ ಕಲಂ 109 ರಡಿ ಜಮೀನು ಖರೀದಿಸಲು ಅನುಮೋದನೆ ನೀಡಲಾಗಿತ್ತೋ ಅದೇ ಉದ್ದೇಶಕ್ಕಾಗಿ ಶ್ರೀ ರೇಣುಕಾ ಶುಗರ್ಸ್ ಲಿ., ಬೆಳಗಾವಿ ಇವರು ಮಂಜೂರಾತಿಯನ್ನು ಕೋರಿರುವ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಸಕ್ಕರೆ ಕಾರ್ಖಾನೆಯ ಬೆಳವಣಿಗೆಯ ದೃಷ್ಟಿಯಿಂದ ಹಾಗೂ ಅಲ್ಲಿಯ ರೈತರ ಹಿತದೃಷ್ಟಿಯಿಂದ ಮತ್ತು ಉದ್ಯೋಗ ಹಾಗೂ ವಿದ್ಯುತ್ ಉತ್ಪಾದನೆಗೆ ಉತ್ತೇಜನ ನೀಡುವ ಹಿನ್ನೆಲೆಯಲ್ಲಿ ಈಗಾಗಲೇ ಪರವಾನಗಿ ನೀಡಿರುವ ಪ್ರಕರಣದ ಜಮೀನಿನಲ್ಲಿ ಶ್ರೀ ರೇಣುಕಾ. ಶುಗರ್ಸ್ ಲಿ., ಬೆಳಗಾವಿ ಇವರು ಅಥಣಿ ತಾಲೂಕು, ಕೊಕಟನೂರು ಗ್ರಾಮದ ರಿ.ಸ.ನಂ 376/2 ರಲ್ಲಿ 9-00 ಎಕರೆ, 377/2 ರಲ್ಲಿ 8-00 ಎಕರೆ, 377/1 ರಲ್ಲಿ 6-00 ಎಕರೆ, 378 ರಲ್ಲಿ 20-29 ಎಕರೆ, 382/1ಎ ರಲ್ಲಿ 5-00 ಎಕರೆ, 383 ರಲ್ಲಿ 18-38 ಎಕರೆ, 384 ರಲ್ಲಿ 14 -28 ಎಕರೆ, 385/1 ರಲ್ಲಿ 10-28 ಎಕರೆ 392/1 ರಲ್ಲಿ 11-20 ಎಕರೆ ಹೀಗೆ ಒಟ್ಟು 104-23 ಎಕರೆ ಜಮೀನನ್ನು ಹರಿಪ್ರಿಯ ಶುಗರ್ ವರ್ಕ್ ಲಿ., ಆಥಣಿ ಇವರಿಂದ ಕರ್ನಾಟಕ ಭುಸುಧಾರಣೆ ಕಾಯ್ದೆ, 1961ರ ಕಲಂ 109 ರಡಿ ಖರೀದಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು;
2. ಕರ್ನಾಟಕ ಭೂಸುಧಾರಣೆ ಕಾಯ್ದೆ, ಕಲಂ 61(2) ರಂತೆ ರಾಜ್ಯ ಸರ್ಕಾರದ ಷೇರು ಇರುವ / ಅಧಿನದಲ್ಲಿರುವ ಹಣಕಾಸು ಸಂಸ್ಥೆ, ಸರ್ಕಾರಿ / ಅರೆಸರ್ಕಾರಿ ಮತ್ತು ವಾಣಿಜ್ಯ ಬ್ಯಾಂಕು ಇತರೆಗಳಿಂದ ಅದರಿ ಸಂಸ್ಥೆಯು ಸಾಲ ಪಡೆಯಲು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು;
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತರ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಅನುಮತಿ ಪಡೆಯಬೇಕು;
5. ಕಲಂ109(2) ರಡಿಯಲ್ಲಿನ ಷರತ್ತು ಸೇರಿದಂತೆ ಅದರಿ ಭೂಮಿಯನ್ನು ನಿಗಧಿತ ಉದ್ದೇಶಕ್ಕೆ ಬಳಸಿಕೊಳ್ಳದಿದ್ದರೆ ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತೆ ಮಾಡಿಕೊಳ್ಳಲಾಗುವುದು.

6. ಪ್ರಸ್ತಾಪಿತ ಭೂಮಿಯನ್ನು ನಿಗದಿತ ಉದ್ದೇಶಕ್ಕೆ 2ವರ್ಷಗಳೊಳಗಾಗಿ ಬಳಸಿಕೊಂಡಿದ್ದಕ್ಕೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮೂಲಕ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
7. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದೆಂದು ತಿಳಿಯತಕ್ಕದ್ದು.
8. ಈ ಅನುಮತಿಯು ಭೂಸುಧಾರಣೆ ಕಾಯ್ದೆಯ ಕಲಂ 109 ರನ್ವಯ ಮಾತ್ರವಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆ ಅಡಿ ಅಗತ್ಯ ಕ್ರಮ ಜರುಗಿಸಲು ಅವಕಾಶ ಇರುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1729

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ).

**ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, (ಇಐಬಿ) ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ: ಇಎಕ್ಸ್‌ಇ:ಡಿಟಿಸಿಆರ್ಎಂ:101:2004-05, ದಿನಾಂಕ: 28ನೇ ಸೆಪ್ಟೆಂಬರ್ 2005**

ಉಪಸ್ಥಿತರು: ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಚಕ್ಷಣದಳ (ಇಐಬಿ), ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು:** |
|---|---|---|
| ಪೊಲೀಸ್ ಉಪ ನಿರೀಕ್ಷಕರು,<br>ಸುಂಟಿಕೊಪ್ಪ ಪೊಲೀಸ್ ಠಾಣೆ,<br>ಸುಂಟಿಕೊಪ್ಪ. | | 1) ಎಂ. ತನ್ವೀರ್, ಬಿನ್ ಮಹಮ್ಮದ್ ಶರೀಫ್ (25 ವರ್ಷ)<br>ವಾಸ: ಗಂಗಾಧರ ಬಡಾವಣೆ ಯಸ್ಲೂರ್ ಪೇಟೆ,<br>ಸಕಲೇಶಪುರ ತಾಲ್ಲೂಕು (ಚಾಲಕ).<br>2) ಲೋಕೇಶ್ ಎ. ಲೋಕಣ್ಣ, ಬಿನ್ ಮಂಜಪ್ಪ (30 ವರ್ಷ)<br>ವಾಸ: ಯಡಕರೆ ಗ್ರಾಮ ಕಿತ್ತೂರು ಅಂಚೆ, ಸಕಲೇಶಪುರ. (ಪರಾರಿಯಾಗಿರುತ್ತಾರೆ).<br>3) ಯೋಗ ಉ: ಯೋಗಣ್ಣ (35 ವರ್ಷ)<br>ಯಸ್ಲೂರ್ ಗ್ರಾಮ (ಪರಾರಿಯಾಗಿರುತ್ತಾರೆ).<br>**ವಾಹನ ಮಾಲೀಕರು:**<br>ಶ್ರೀ ಸಿ.ಎ. ಸಿದ್ದಿಕ್, ಬಿನ್ ಸಿ.ಕೆ. ಆಲಿ,<br>ಚೌಡ್ಲು ಅಂಚೆ, ಕಾನ್ವೆಂಟ್ ರಸ್ತೆ, ಸೋಮವಾರಪೇಟೆ ತಾಲ್ಲೂಕು |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ 16-12-2004 ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಫಿರ್ಯಾದುದಾರರು ತಮ್ಮ ಸಿಬ್ಬಂದಿಗಳೊಂದಿಗೆ ತಮ್ಮ ಇಲಾಖಾ ವಾಹನದಲ್ಲಿ ಹೊರಟು ಸುಂಟಿಕೊಪ್ಪ ಮಾದಾಪುರ ಸಾರ್ವಜನಿಕ ರಸ್ತೆ ಹರದೂರು ಗ್ರಾಮದಲ್ಲಿ ಹೊಂಚು ಹಾಕುತ್ತಿರುವಾಗ ಮಾದಾಪುರ ಕಡೆಯಿಂದ ಸುಂಟಿಕೊಪ್ಪ ಕಡೆಗೆ ಒಂದು ಬಿಳಿ ಬಣ್ಣದ ಮಾರುತಿ ಒಂಮ್ನಿ ವ್ಯಾನ್ ಬರುತ್ತಿದ್ದದನ್ನು ಕಂಡು ಅದನ್ನು ಹಿಂಬಾಲಿಸಿಕೊಂಡು ಹರದೂರು ಗ್ರಾಮದಗುಂಡಿಕುಟ್ಟಿ ಕಾಫಿತೋಟದ ಕರ್ನಲ್ ಕುಮಾರ ಸ್ವಾಮಿ ಎಂಬುವರ ತೋಟದ ಗೇಟಿಗೆ ಡಿಕ್ಕಿ ಹೊಡೆದು ವಾಹನದ ಮುಂಭಾಗದ ಗ್ಲಾಸ್ ಪುಡಿಪುಡಿಯಾಗಿರುತ್ತದೆ. ಸದರಿ ವ್ಯಾನ್‌ನಿನ ಚಾಲಕನು ವ್ಯಾನ್‌ನಿಂದ ಓಡಲು ಪ್ರಯತ್ನಿಸಿದಾಗ ತಮ್ಮ ಸಿಬ್ಬಂದಿಯವರು ಹಿಡಿದುಕೊಂಡು ವಿಚಾರಿಸಿದಾಗ ತಾನು ವಾಹನದ ಚಾಲಕನಾಗಿದ್ದು ತನ್ನ ಹೆಸರು ಎಂ.ತನ್ವೀರ್, ಬಿನ್ ಮಹಮ್ಮದ್‌ಶರೀಫ್ ಎಂದು ತಿಳಿಸಿದ್ದಾರೆ. ಸದರಿ ವ್ಯಾನ್‌ನಲ್ಲಿದ್ದ ಇಬ್ಬರು ಸಹಾಯಕರು ಕಾಫಿತೋಟದ ಒಳಗೆ ಓಡಿಹೋಗಿದ್ದು ಇವರನ್ನು ಹಿಡಿಯಲು ಪ್ರಯತ್ನಿಸಲಾಗಿದ್ದು ಇವರುಗಳು ದೊರೆತಿರುವುದಿಲ್ಲ. ಸದರಿ ಚಾಲಕನಲ್ಲಿ ಓಡಿಹೋದ ಆರೋಪಿಗಳನ್ನು ವಿಚಾರಿಸಲಾಗಿ ಒಬ್ಬ ಲೋಕೇಶ್ ಮತ್ತು ಇನ್ನೊಬ್ಬ ಯೋಗ ಎಂದು ತಿಳಿಸಿರುತ್ತಾನೆ.

ಸದರಿ ವ್ಯಾನ್‌ನಲ್ಲಿ ಅಕ್ರಮವಾಗಿ ಯಾವುದೇ ಹರದಾರಿ ಪತ್ರವಿಲ್ಲದೆ ಒಟ್ಟು 100ಎಂ.ಎಲ್ X 2,450 ಸಾರಾಯಿ ಪ್ಯಾಕೇಟುಗಳನ್ನು ಕಾನೂನಿಗೆ ವಿರುದ್ದವಾಗಿ ಮಾರುತಿ ಒಮ್ನಿ ವ್ಯಾನ್ ಸಂ.KA-05-M-5524 ರಲ್ಲಿ ಸಾಗಾಣಿಕೆ ಮಾಡುತ್ತಿರುವುದು ಸದರಿ ಸಾರಾಯಿಯನ್ನು ಸಕಲೇಶಪುರದಿಂದ ಸಾಗಾಟ ಮಾಡುತ್ತಿರುವುದಾಗಿ ಚಾಲಕನು ತಿಳಿಸಿರುತ್ತಾನೆ. ಸದರಿ ಚಾಲಕನು ಕಾನೂನು ಭಾಹಿರವಾಗಿ ರಹದಾರಿ ಇಲ್ಲದೆ ಅಕ್ರಮವಾಗಿ ಸಾರಾಯಿಯನ್ನು ಸಾಗಿಸಿರುವುದು ಕರ್ನಾಟಕ ಅಬಕಾರಿ ಕಾಯಿದೆ 1965 ರ 11,14, ರೀತ್ಯ ಅಪರಾದವಾಗಿದ್ದು, ಸಾರಾಯಿ ಮತ್ತು ಸಾಗಾಣಿಕೆಗೆ ಬಳಸಿದ ಮಾರುತಿ ಒಂಮ್ನಿ ವ್ಯಾನ್‌ನನ್ನು ಜಪ್ತುಮಾಡಿಕೊಂಡು ಇಲಾಖಾ ವಶಕ್ಕೆ ತೆಗೆದುಕೊಂಡು ಹಾಜರಿದ್ದ ಆರೋಪಿಯನ್ನು ದಸ್ತಗಿರಿ ಮಾಡಿರುತ್ತಾರೆ. ಮಹಜರ್‌ನ್ನು ಸ್ಥಳದಲ್ಲಿಯೇ ಬರೆದು ಇಲಾಖೆ ಸಿಬ್ಬಂದಿಗಳಿಂದ ಸಹಿ ಪಡೆದಿರುತ್ತಾರೆ.

ಪ್ರಕರಣದಲ್ಲಿ ಜಪ್ತುಮಾಡಲ್ಪಟ್ಟ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಯಾಗಿದ್ದು ಇದು ಅಕ್ರಮ ಸಾರಾಯಿ ಸಾಗಾಣಿಕೆಯಾಗಿರುವುದರಿಂದ ಪೋಲಿಸ್ ಉಪ ನಿರೀಕ್ಷಕರು, ಸುಂಟಿಕೊಪ್ಪ ಪೋಲೀಸ್ ಠಾಣೆ ಇವರು ಕರ್ನಾಟಕ ಅಬಕಾರಿ ಅಧಿನಿಯಮ 1965 ರ ಕಲಂ 32,34,43,43(ಎ) ರನ್ವಯ ಮೊಕದ್ದಮೆ ಸಂಖ್ಯೆ 93/2004 ದಿ:16-12-04 ಮೊಕದ್ದಮೆ ದಾಖಲು ಮಾಡಿ ಸ್ವತ್ತುಗಳ ಪಟ್ಟಿ ತಯಾರಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ತನ್ನ ಮೇಲಾಧಿಕಾರಿಗಳಿಗೂ ಸಲ್ಲಿರುತ್ತಾರೆ.

ಪ್ರಕರಣಕ್ಕೆ ಸಂಬಂಧಪಟ್ಟ ಪಂಚನಾಮೆಯ ಪ್ರತಿ, ಪ್ರಥಮ ಮಾಹಿತಿ ಸ್ವರದಿ ಪ್ರತಿ ಮತ್ತು ಸ್ವತ್ತಿನ ಪಟ್ಟಿಯ ಪ್ರತಿಯನ್ನು ಫಿರ್ಯಾಧಿನೊಂದಿಗೆ ಪ್ರಾಧಿಕಾರಕ್ಕೆ ಸಲ್ಲಿಸಿ ಪ್ರಕರಣದ ಸ್ವತ್ತುಗಳನ್ನು ಹಾಗೂ ದಾಖಲೆ ಪತ್ರಗಳನ್ನು ಮುಂದಿನ ತನಿಖೆ ಬಗ್ಗೆ ಅಬಕಾರಿ ಉಪ ನಿರೀಕ್ಷಕರು, ಕುಶಾಲನಗರ ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಹಸ್ತಾಂತರ ಪಡೆದ ಅಬಕಾರಿ ಉಪ ನಿರೀಕ್ಷಕರು, ಕುಶಾಲನಗರ ಉಪ ವಲಯ ಇವರು ತನಿಖೆಯನ್ನು ಪ್ರಾರಂಭಿಸಿ ವಶಪಡಿಸಿಕೊಂಡ ಸಾರಾಯಿಯಿಂದ ಮಾದರಿಯಾಗಿ ತೆಗೆದು ಸಾರಾಯಿ ಸ್ಯಾಪಂಲ್‌ಗಳನ್ನು ರಾಸಾಯನಿಕ ತಜ್ಞರು, ಮೈಸೂರು ಇವರಿಗೆ ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು ಇವರ ಪತ್ರ ಸಂಖ್ಯೆ. ಇ/225/18/12/3/05 ರಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ 35.34 ವಿವಿ ಇದ್ದು ಸಾರಾಯಿ ಪ್ಯಾಕೇಟನ್ನು

ಪರಿಶೀಲಿಸಲಾಗಿ ಇದರ ಮೇಲೆ ಬ್ಯಾಚ್ ನಂ. ಇರುವುದಿಲ್ಲ. ಹಾಗೂ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದ ಚಿಹ್ನೆ ಇರುವುದಿಲ್ಲ. ಆದುದರಿಂದ ಇದನ್ನು ಮಿಶ್ ಬ್ರಾಂಡ್ ಎಂದು ಘೋಷಿಸಿ ದೃಡಿಕರಣ ಪತ್ರ ನೀಡಿರುತ್ತಾರೆ. ಇದರಂತೆ ಅಬಕಾರಿ ಉಪ ನಿರೀಕ್ಷಕರು, ಕುಶಾಲನಗರ ಉಪ ವಲಯ ಇವರ ತನಿಖಾ ವರದಿ ಸಂಖ್ಯೆ 21/2004-05, ದಿ:14-4-05 ರಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೇಟ್‌ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಬೇಕಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮಾರುತಿ ಒಮ್ನಿ ವ್ಯಾನ್ ಸಂ.KA-05-M-5524 ರ ಆರ್‌ಸಿ ಮಾಲೀಕರನ್ನು ಪತ್ತೆಹಚ್ಚಲು ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಲ್ಲಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಈ ಪ್ರಾಧಿಕಾರದಿಂದ ದಿ:24 2 05 ರಂದು ಪತ್ರ ಬರೆಯಲಾಗಿದ್ದು. ಪ್ರಾದೇಶಿಕ ಸಾರಿಗೆ ಅಧಿಕಾರಿ ಕೊಡಗು ಜಿಲ್ಲೆ, ಮಡಿಕೇರಿ ಇವರ ಪತ್ರ ದಿ:24 5 05 ರಲ್ಲಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮಾರುತಿ ಒಮ್ನಿ ವ್ಯಾನ್ ಸಂ KA-05-M-5524 ರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೊಂದಣಿ ಮಾಲೀಕರಾದ ಶ್ರೀ ಸಿ.ಎ. ಸಿದ್ದಿಕ್, ಬಿನ್ ಸಿ.ಕೆ. ಅಲಿ,ಚೌಡ್ಲು ಅಂಚೆ, ಕಾನ್ವೆಂಟ್ ರಸ್ತೆ, ಸೋಮವಾರಪೇಟೆ ತಾಲ್ಲೂಕು ಕೊಡಗು ಹಾಗೂ ಅರ್ಚನಾ ಫೈನಾನ್ಸ್ 4, ಚಂದ್ರಪ್ಪ ಮುರಳಿ ಸ್ಟ್ರೀಟ್, ಸಾವುಕಾರ್‌ಪೇಟೆ, ಚನ್ನೈ ರವರಿಗೆ ನಿಯಮ 43ಬಿ ರನ್ವಯ ಕಾರಣ ಕೇಳಿ ನೋಟೀಸನ್ನು ದಿ: 14-7-05 ರಂದು ನೀಡಲಾಗಿರುತ್ತದೆ.

ಸದರಿ ಕಾರಣ ಕೇಳಿ ನೋಟೀಸ್‌ಗೆ ಅನುಗುಣವಾಗಿ ನೊಂದಣಿ ಮಾಲೀಕರಾದ ಶ್ರೀ ಸಿ.ಎ.ಸಿದ್ದಿಕ್ ರವರು ಈ ಪ್ರಾಧಿಕಾರಕ್ಕೆ ದಿ: 30-9-05 ರಂದು ಅರ್ಜಿ ಸಲ್ಲಿಸಿ ತನ್ನ ವಾಹನವನ್ನು ಬೇರೆಯವರಿಗೆ ಮಾರಾಟ ಮಾಡಿರುತ್ತೇನೆಂದು ಕರಾರು ಪತ್ರವನ್ನು ಸಲ್ಲಿಸಿರುತ್ತಾರೆ. ಆದರೆ ಸದರಿ ವಾಹನವನ್ನು ಮಾರಾಟ ಮಾಡಿದ ತಿರುವಳಿ ಪತ್ರ ಪಡೆದಿರುವುದಿಲ್ಲ. ಆದುದರಿಂದ ನಿಯಮಾನುಸಾರ ಸದರಿ ವಾಹನವನ್ನು ಇತರರಿಗೆ ಮಾರಾಟ ಮಾಡಿರುವುದು ಸಾಬೀತು ಪಡಿಸಲು ಯಾವುದೇ ಸಾಕ್ಷ್ಯಾಧಾರಗಳು ಇರುವುದಿಲ್ಲ. ಹಾಗೂ ಅರ್ಚನಾ ಫೈನಾನ್ಸ್ ಚನ್ನೈ ಇವರಿಂದ ಈ ಕಛೇರಿಯಿಂದ ನೀಡಲಾದ ಕಾರಣ ಕೇಳಿ ನೋಟಿಸ್‌ಗೆ ಉತ್ತರ ಬಂದಿರುವುದಿಲ್ಲ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮಾರುತಿ ಒಮ್ನಿ ವ್ಯಾನ್ ಸಂ KA-05-M 5524 ರನ್ನು ವಶಪಡಿಸಿಕೊಂಡು ಸುಮಾರು 9 ತಿಂಗಳು ಕಳೆದರೂ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರ ಮುಂದೆ ಹಾಜರಾಗಿ ವಾಹನವನ್ನು ತನ್ನದೆಂದು ಕೋರಿ ವಾಹನದ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ರಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಲ್ಲಿ ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತು ಮಾಡಲಾದ ವಾಹನವನ್ನು ಜಪ್ತುಪಡಿಸಿದ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧವಾದ ದಾಖಲಾತಿಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದ್ದಲ್ಲಿ ಮತ್ತು ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ 1965, ಕಲಂ 43 ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಂತಹ ಸ್ವತ್ತುಗಳಾಗಿದ್ದಲ್ಲಿ ಈ ಪ್ರಾಧಿಕಾರವು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಸದರಿ ಪ್ರಕರಣದಲ್ಲಿ ಪೋಲೀಸ್ ಉಪ ನಿರೀಕ್ಷಕರು, ಸುಂಟಿಕೊಪ್ಪ ಪೋಲೀಸ್ ಠಾಣೆ, ಸುಂಟಿಕೊಪ್ಪರವರು ಅಕ್ರಮವಾಗಿ 100ಎಂ.ಎಲ್ X 2,450 ಸಾರಾಯಿ ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡುವಾಗ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನ ಪಡೆಸಿದ್ದು ಹಾಗೂ ವಾಹನದಲ್ಲಿ ಜಪ್ತುಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ಪ್ರಕಾರ ಸಾರಾಯಿಯಾಗಿದ್ದು ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಕಾನೂನಿನ ಉಲ್ಲಂಘಣೆಯಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುತ್ತದೆ.

ಈ ಮೇಲಿನ ಅಂಶಗಳನ್ನು ಪರಿಶೀಲನೆ ಮಾಡಿದಾಗ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮಾರುತಿ ಒಮ್ನಿ ವ್ಯಾನ್ ಸಂ. KA-05-M-5524 ರನ್ನು ವಶಪಡಿಸಿಕೊಂಡು ಸುಮಾರು 9 ತಿಂಗಳುಗಳಿಗಿಂತ ಹೆಚ್ಚು ಸಮಯವಾಗಿದ್ದು ಯಾವುದೇ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರ ಮುಂದೆ ಹಾಜರಾಗಿರುವುದಿಲ್ಲ. ಹಾಗೂ ವಾಹನದ ಮಾಲೀಕರಿಗೆ ಈ ಪ್ರಾಧಿಕಾರದಿಂದ ಕಾರಣ ಕೇಳಿ ನೋಟೀಸ್ ನೀಡಿದರೂ ಸಹ ಅವರು ಸ್ಪಷ್ಟವಾಗಿ ಉತ್ತರವನ್ನು ನೀಡಿರುವುದಿಲ್ಲ. ಆದುದರಿಂದ ವಹನದ ಮಾಲೀಕರು ಅವರ ತಿಳುವಳಿಕೆಯಿಂದಲೇ ಈ ಕೃತ್ಯಕ್ಕೆ ಸಾಮೀಲಾಗಿರುವುದು ಸ್ಪಷ್ಟವಾಗಿ ಕಾಣಬರುತ್ತದೆ.

ಸದರಿ ವಾಹನವನ್ನು ತೆರೆದಿಟ್ಟ ಬಯಲು ಪ್ರದೇಶದಲ್ಲಿ ನಿಲ್ಲಿಸಲಾಗಿರುವುದರಿಂದ ಹಾಗೂ ಕೊಡಗು ಜಿಲ್ಲೆಯಲ್ಲಿ ವಿಪರೀತ ಮಳೆ ಬೀಳುವುದರಿಂದ ವಾಹನದ ಭಾಗಗಳು ಚಾಲನೆಯ ಸ್ಥಿತಿಯಿಲ್ಲದೆ ನಿಂತಲ್ಲೆ ನಿಂತು ತುಕ್ಕು ಹಿಡಿದು ಹಾಳಾಗಿರುತ್ತದೆ. ಇನ್ನು ಹೆಚ್ಚು ಸಮಯ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಹಾಳಾಗುವ ಸಾಧ್ಯತೆ ಇರುವುದರಿಂದ ಸರ್ಕಾರಕ್ಕೆ ಬರುವ ಆದಾಯ ಕಡಿಮೆಯಾಗುವ ಸಾಧ್ಯತೆಯಿರುವುದರಿಂದ ಸದರಿ ಮಾರುತಿ ಒಮ್ನಿ ವ್ಯಾನ್ ಸಂ.KA-05-M-5524 ರನ್ನು ಮತ್ತು ಸದರಿ ಸಾರಾಯಿ ಪ್ಯಾಕೇಟುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯ ಎಂಬ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕ್ಷಕರು, ಕೊಡಗು ಜಿಲ್ಲೆ ಮಡಿಕೇರಿ, ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43(ಎ) ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ)ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೋಲೀಸ್ ಉಪ ನಿರೀಕ್ಷಕರು, ಸುಂಟಿಕೊಪ್ಪ ಪೋಲೀಸ್ ಠಾಣೆ, ಸುಂಟಿಕೊಪ್ಪ ಇವರ ಮೊಕದ್ದಮೆ ಸಂ: 93/2004 ದಿ:16-12-2004 ರಂದು ಜಪ್ತುಪಡಿಸಿಕೊಂಡ ಮಾರುತಿ ಒಮ್ನಿ ವ್ಯಾನ್ ಸಂ KA-05-M-5524 ರನ್ನು ಮತ್ತು ಮೊಖದ್ದಮೆಯಲ್ಲಿ ವಶಪಡಿಸಿಕೊಂಡ 100ಎಂಎಲ್ X 2,450 ಸಾರಾಯಿ ಸ್ಯಾಚೇಟ್‌ಗಳಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಸ್ಯಾಂಪಲ್‌ಗಳನ್ನು ಹೊರತುಪಡಿಸಿ ಉಳಿದ ಸ್ಯಾಚೇಟ್‌ಗಳನ್ನು ಹಾಗೂ ಅಕ್ರಮ ಸಾಗಾಣಿಕೆಗೆ ಬಳಸಿದ ಮಾರುತಿ ಒಮ್ನಿ ವ್ಯಾನ್ ಸಂಖ್ಯೆ: KA-05-M-5524 ರನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಸಿ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಸಾರಾಯಿ ಸ್ಯಾಚೇಟುಗಳು ರಾಸಾಯನಿಕ ವಿಶ್ಲೇಷಕರ ಪ್ರಕಾರ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದ ಬಗ್ಗೆ ಯಾವುದೇ ಚಿಹ್ನೆ ಇರುವುದಿಲ್ಲ, ಹಾಗೂ ಇದನ್ನು ಮಿಶ್‌ಬ್ರಾಂಡ್ ಎಂದು ಧೃಡಿಕರಣ ಪತ್ರ ನೀಡಿರುವ ಮೇರೆಗೆ ಸದರಿ ಸಾರಾಯಿ ಪ್ಯಾಕೇಟುಗಳನ್ನು ಸಾರ್ವಜನಿಕರಿಗೆ ವಿತರಿಸಲು ಸಾಧ್ಯವಾಗದ ಕಾರಣ ನಿಯಮ 43ಎ (3) ರನ್ವಯ ಅಬಕಾರಿ ಉಪ ಅಧೀಕ್ಷಕರು(ಪ್ರಭಾರ) ಮಡಿಕೇರಿ ಉಪ ವಿಭಾಗ ಇವರ ಸಮಕ್ಷಮ ಸೂಕ್ತ ಮಹಜರ್ ಜರುಗಿಸಿ ನಾಶಪಡಿಸಲು ಆದೇಶಿಸಿದೆ.

ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನವನ್ನು 30 ದಿನಗಳು ಕಳೆದ ನಂತರ ಕರ್ನಾಟಕ ಅಬಕಾರಿ (ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮಗಳ 1967 ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲು ಆದೇಶಿಸಿದೆ.

ಈ ಆದೇಶ ಇಂದು ಅಂದರೆ 28.9.2005 ರಂದು ಬೆರಳಚ್ಚು ಮಾಡಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಇಂದಿನಿಂದ 30 ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 1756

**ಸಹಕಾರ ಇಲಾಖೆ**

**ಸಂಖ್ಯೆ: ಸನಿವ/ವ.ಅ./65/2005-06, ದಿನಾಂಕ: 31ನೇ ಅಕ್ಟೋಬರ್ 2005**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿಯಮ 441 ರನ್ವಯ ವಸೂಲಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-04, ಇವರ ನಡವಳಿಕೆಗಳು.**

**ವಿಷಯ:** ಶ್ರೀ ಮಹಾಂತೇಶ್ ಬಿನ್ ಶ್ರೀ ಸೋಮಯ್ಯ ಯರಗಟ್ಟಿಮತ್ ಮುಕ್ಕಾಂ: ಯಾದವಾಡ್ ತಾಲ್ಲೂಕು ಗೋಕಾಕ್ ಜಿಲ್ಲಾ ಬೆಳಗಾಂ ಇವರ ಸಾಲದ ಬಾಕಿ ವಸೂಲಿ ಬಗ್ಗೆ ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿ ಬಹಿರಂಗ ಹರಾಜು ದಿನಾಂಕ 29-07-2005.

**ಉಲ್ಲೇಖ:** ಸಿ.ಇ.ಪಿ. ನಂ. 17/2004-05

**ಪ್ರಸ್ತಾವನೆ:**

**ಶ್ರೀ ಮಹಾತೇಶ್ ಬಿನ್ ಶ್ರೀ ಸೋಮಯ್ಯ ಯರಗಟ್ಟಿಮತ್ ಮುಕ್ಕಾಂ: ಯಾದವಾಡ್ ತಾಲ್ಲೂಕು ಗೋಕಾಕ್ ಜಿಲ್ಲಾ ಬೆಳಗಾಂ.** ಇವರು ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ, ಬೆಳಗಾಂ ಶಾಖೆಯಿಂದ ಸಾಲ ಪಡೆದು ಸಕಾಲದಲ್ಲಿ ಅಸಲು ಮತ್ತು ಬಡ್ಡಿಯನ್ನು ಮರುಪಾವತಿಸಿದ ಕಾರಣ ಸದರಿ ಸುಸ್ತಿದಾರರ ಮೇಲೆ ಸಹಕಾರ ಸಂಘಗಳ ಕಾಯ್ದೆಯಡಿ ಸಂಬಂಧಪಟ್ಟ ಅಧಿಕಾರಿಗಳ ನ್ಯಾಯಾಲಯದಲ್ಲಿ ದಾವೆ ಹೂಡಿ ಸುಸ್ತಿಸಾಲ ವಸೂಲಾತಿಗಾಗಿ ಸದರಿಯವರ ವಿರುದ್ಧ ದಾವೆ ಸಂಖ್ಯೆ ಎ(ಐ ಮತ್ತು ಎಂ) ಡಿ 7/8283/ 2002-2003 ದಿನಾಂಕ 08-06-2004 ರಂತೆ ಡಿಕ್ರಿ ಪಡೆದು ಡಿಕ್ರಿದಾರ ಬ್ಯಾಂಕ್‌ನವರು ಸದರಿಯವರ ವಿರುದ್ಧ ಸಿ.ಇ.ಪಿ.ನಂ. 17/ 04-05 ರಂತೆ ಅಮಲ್ಜಾರಿ ಆದೇಶ ಪಡೆದು ಅಮಲ್ಜಾರಿ ಕಡತವನ್ನು ಮುಂದಿನ ಕ್ರಮಕ್ಕಾಗಿ ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಿಕೊಡಲಾಗಿತ್ತು. ಸದರಿ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣದ ವಿಲೇವಾರಿ ಮತ್ತು ಸುಸ್ತಿಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳಂತೆ ಕ್ರಮವಿಟ್ಟು ಸುಸ್ತಿದಾರರಿಗೆ ಸೇರಿದ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅಂತಿಮವಾಗಿ ದಿನಾಂಕ 29-07-2005 ರಂದು ಬಹಿರಂಗ ಹರಾಜಿಗೊಳಪಡಿಸಿದ್ದು, ಸದರಿ ದಿನದಂದು ಶ್ರೀ ಅಬ್ದುಲ್ ಗಫಾರ್ ಬಿನ್ ಶ್ರೀ ಪಕೀರ್‌ಸಾಬ್ ಅಂಗಡಿ. ಸವದತ್ತಿ, ಜಿಲ್ಲಾ ಬೆಳಗಾಂ ಮತ್ತು ಶ್ರೀ ಅಲಿಸಾಬ್ ಬಿನ್ ಫಕೀರ್‌ಸಾಬ್ ನದಾಫ್ ಮತ್ತು ಮುಕ್ಕಾ : ಕಬ್ಬೆನೂರು, ಜಿಲ್ಲಾ ಧಾರವಾಡ ಇವರು ಅತಿ ಹೆಚ್ಚಿನ ಮೊತ್ತ ರೂ.7.70.000-00ಕ್ಕೆ ಏಳು ಲಕ್ಷದ ಎಪ್ಪತ್ತು ಸಾವಿರ) ಮಾತ್ರ ಬಿಡ್ ಮಾಡಿರುತ್ತಾರೆ ಅದರಂತೆ ಮಾರಾಟಾಧಿಕಾರಿಗಳು ಬಿಡ್‌ನ್ನು ಶ್ರೀ ಶ್ರೀ ಅಬ್ದುಲ್ ಗಫಾರ್ ಬಿನ್ ಶ್ರೀ ಪಕೀರ್‌ಸಾಬ್ ಅಂಗಡಿ ಮತ್ತು ಶ್ರೀ ಅಲಿಸಾಬ್ ಬಿನ್ ಫಕೀರ್‌ಸಾಬ್ ನದಾಫ್‌ರವರ ಹೆಸರಿಗೆ ನಿಲ್ಲಿಸಿ, ಮುಂದಿನ ಕ್ರಮಕ್ಕಾಗಿ ಹರಾಜಿನ ದಾಖಲೆಗಳನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಹರಾಜಿನ ನಂತರ ಡಿಕ್ರಿದಾರ ಬ್ಯಾಂಕಿನಿಂದ ಬ್ಯಾಂಕಿಗೆ ಬಾಕಿ ಇರುವ ಮೊತ್ತವನ್ನು 30 ದಿವಸದೊಳಗಾಗಿ ಜಮಾ ಮಾಡಿ ತಮ್ಮ ಸ್ಥಿರಾಸ್ತಿಯನ್ನು ತಾವೇ ಉಳಿಸಿಕೊಳ್ಳಬಹುದೆಂದು ಸುಸ್ತಿದಾರರಿಗೆ ನೋಟೀಸ್ ನೀಡಿದ್ದಾಗ್ಯೂ ಅವರು ಹಣವನ್ನು ಪಾವತಿಸಿದೆ ಹಾಗೂ ಅವರಿಂದ ಯಾವುದೇ ಪ್ರತಿಕ್ರಿಯೆ ಬರದೆಯಿರುವುದರಿಂದ ದಾಖಲಾತಿಗಳೊಂದಿಗೆ ಬ್ಯಾಂಕಿನ ಮಾರಾಟಾಧಿಕಾರಿ, ಬೆಳಗಾಂ ಶಾಖೆ ಇವರು ಮಾರಾಟ ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿದ್ದು, ಸದರಿ ದಾಖಲೆಗಳನ್ನು ಪರಿಶೀಲಿಸಿದಾಗ, ಮಾರಾಟದ ನಡವಳಿಕೆಗಳು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರನ್ವಯ ಯಾರೂ.38(2)(ಡಿ)ರ ಪ್ರಕಾರ ಕ್ರಮ ಜರುಗಿಸಿರುವುದು ಕಂಡು ಬಂದಿರುತ್ತೆ. ಆದ್ದರಿಂದ ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ರ ನಿಯಮ 38(6)(ಎ) ಅನ್ವಯ ಎಂ.ನಾಗಭೂಷಣ ಶೆಟ್ಟಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ ನಿಯಮ 441, ಕರ್ನಾಟಕರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು ಆದ ನಾನು, **ಶ್ರೀ ಮಹಾಂತೇಶ್ ಬಿನ್ ಶ್ರೀ ಸೋಮಯ್ಯ ಯರಗಟ್ಟಿಮತ** ಇವರಿಗೆ ಸೇರಿದ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ 29 07 2005ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಮೊತ್ತ ರೂ.7.70.000 00 (ಏಳು ಲಕ್ಷದ ಎಪ್ಪತ್ತು ಸಾವಿರ) ಮಾತ್ರಕ್ಕೆ ಬಿಡ್ ಮಾಡಿದ ಶ್ರೀ ಅಬ್ದುಲ್ ಗಫಾರ್ ಬಿನ್ ಶ್ರೀ ಪಕೀರ್‌ಸಾಬ್ ಅಂಗಡಿ ಮತ್ತು ಶ್ರೀ ಅಲಿಸಾಬ್ ಬಿನ್ ಫಕೀರ್‌ಸಾಬ್ ನದಾಫ್ ಇವರ ಹೆಸರಿಗೆ ಈ ಕೂಡಲೇ ಜಾರಿಗೆ ಬರುವಂತೆ ಎಲ್ಲಾ ಹಕ್ಕು ಸ್ವಾಮ್ಯ ಪತ್ರಗಳನ್ನು ವರ್ಗಾವಣೆ ಮಾಡಿ ಮಾರಾಟ ಸ್ಥಿರೀಕರಣದ ಆದೇಶವನ್ನು ನೀಡಿರುತ್ತೇನೆ.

**ಷೆಡ್ಯೂಲ್ ಸ್ಥಿರಾಸ್ತಿಯ ವಿವರ**

ಸಿಎಮಸಿ ನಂ. 2888 ಪ್ಲಾಟ್ ನಂ.524, ರಾಮಾಪುರ ಸೈಟ್, ಸವದತ್ತಿ, ಜಿಲ್ಲಾ ಬೆಳಗಾಂ ಇದರ ಒಟ್ಟು ವಿಸ್ತೀರ್ಣ ಉತ್ತರ ದಕ್ಷಿಣ 60, ಪೂರ್ವ ಪಶ್ಚಿಮ 40 (ಒಟ್ಟು 2,400 ಚ.ಅ.) ಅಳತೆ ಇರುತ್ತದೆ.

**ಚೆಕ್ಕುಬಂದಿ**

| | | |
|---|---|---|
| ಪೂರ್ವಕ್ಕೆ | : | ಶ್ರೀ ಯಮನಪ್ಪ ಸೂಳೆಬಾವಿ ಇವರ ಪ್ಲಾಟ್ |
| ಪಶ್ಚಿಮಕ್ಕೆ | : | ಶ್ರೀ ಈರಪ್ಪ ಸೂತಗಟ್ಟಿ ಸ್ವತ್ತು |
| ಉತ್ತರಕ್ಕೆ | : | ಶ್ರೀ ಪತ್ರೆಪ್ಪ ಸುತಗಟ್ಟಿ ಇವರ ಸ್ವತ್ತು |
| ದಕ್ಷಿಣಕ್ಕೆ | : | ರಸ್ತೆ |

ಮೇಲ್ಕಂಡ ಸ್ಥಿರಾಸ್ತಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸ ಬೇಕಾಗಿರುವ ಪೂರ್ಣ ಸಾಲ ವಸೂಲಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ದಿನಾಂಕ 31-10-2005 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಾಧಿಕಾರಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ, ಬೆಂಗಳೂರು.

ಪಿ.ಆರ್. ನಂ. 1803

**ಸಹಕಾರ ಇಲಾಖೆ**

**ಸಂಖ್ಯೆ: ಸನಿವ/ಯಾ.ಸ್ಥಿರೀಕರಣ/82/2004-05, ದಿನಾಂಕ: 14ನೇ ನವೆಂಬರ್ 2005**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿಯಮ 441 ರನ್ವಯ ವಸೂಲಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು -04, ಇವರ ನಡವಳಿಕೆಗಳು.**

**ವಿಷಯ :** ಶ್ರೀ ಮೃತ್ಯುಂಜಯ ಬಿನ್ ಸಣ್ಣವೀರಪ್ಪ , ಮೆ.ಎಸ್.ಎ. ಟ್ರೇಡಿಂಗ್ ಕಂಪನಿ, ಚಳ್ಳಕೆರೆ ಇವರ ಸಾಲದ ಬಾಕಿ ವಸೂಲಿ ಬಗ್ಗೆ ಬ್ಯಾಂಕಿಗೆ ಆಧಾರ ಮಾಡಿರುವ ಸಿ.ಇ.ಪಿ. 24/04-05/; ರಲ್ಲಿರುವ ಸ್ಥಿರಾಸ್ತಿ ಬಹಿರಂಗ ಹರಾಜು ದಿನಾಂಕ 17-08-2005. ರಂದು ನೆಡೆದಿದ್ದು ಸ್ತಿರೀಕರಿಸುವ ಬಗ್ಗೆ.

**ಉಲ್ಲೇಖ :**
1) ಸಾಲಗಾರರ ಆಕ್ಷೇಪನಾ ಪತ್ರದ ದಿನಾಂಕ 15-09-2005.
2. ಮಾರಾಟಾಧಿಕಾರಿ ಇವರ ಪತ್ರದ ಸಂಖ್ಯೆ ಇಲ್ಲ. ದಿನಾಂಕ: 26.09.2005 ಮತ್ತು 24-10-2005.
3. ಈ ಕಛೇರಿ ನೋಟೀಸ್ ಪತ್ರದ ಸಂಖ್ಯೆ 69/2005-2006 ದಿನಾಂಕ 07-10-2005.
4. ಶ್ರೀ ಮೃತ್ಯುಂಜಯ ಇವರ ಪತ್ರದ ದಿನಾಂಕ 20-10-2005.
5. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ, ಬೆಂಗಳೂರು. ಇವರ ಪತ್ರದ ಸಂಖ್ಯೆ ಆರ್‌ಡಿ ಆರ್2/6(2)/2005 -06 ದಿನಾಂಕ 08-11-2005.

**ಪ್ರಸ್ತಾವನೆ:**

ಶ್ರೀ ಮೃತ್ತುಂಜಯ ಬಿನ್ ಸಣ್ಣವೀರಪ್ಪ, ಮೆ: ಎಸ್.ಎ. ಟ್ರೇಡಿಂಗ್ ಕಂಪನಿ, ಚಳ್ಳಕೆರೆ ಇವರು ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ, ಚಿತ್ರದುರ್ಗ ಶಾಖೆಯಿಂದ ಸಾಲ ಪಡೆದು ಸಕಾಲದಲ್ಲಿ ಅಸಲು ಮತ್ತು ಬಡ್ಡಿಯನ್ನು ಮರುಪಾವತಿಸಿದ ಕಾರಣ ಸದರಿ ಸುಸ್ತಿದಾರರ ಮೇಲೆ ಸಹಕಾರ ಸಂಘಗಳ ಕಾಯ್ದೆಯಡಿ ಸಂಬಂಧಪಟ್ಟ ಅಧಿಕಾರಿಗಳ ನ್ಯಾಯಾಲಯದಲ್ಲಿ ದಾವೆ ಹೂಡಿ ಸುಸ್ತಿಸಾಲ ವಸೂಲಾತಿಗಾಗಿ ಸದರಿಯವರ ವಿರುದ್ದ ದಾವ ಸಂಖ್ಯೆ ಎ(ಐ ಮತ್ತು ಎಂ)/ಡಿ 7/4081/2004-05 ದಿನಾಂಕ 9-08-2004 ರಂತೆ ಡಿಕ್ರಿ ಪಡೆದು ಡಿಕ್ರಿಧಾರ ಬ್ಯಾಂಕ್‌ನವರು ಉಸದರಿಯವರ ವಿರುದ್ದ ಸಿ.ಇ.ಪಿ.ನಂ. 24/04-05 ರಂತೆ ಅಮಲ್ಜಾರಿ ಆದೇಶ ಪಡೆದು ಅಮಲ್ಜಾರಿ ಕಡತವನ್ನು ಮುಂದಿನ ಕ್ರಮಕ್ಕಾಗಿ ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಿಕೊಡಲಾಗಿತ್ತು. ಸದರಿ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣದ ವಿಲೇವಾರಿ ಮತ್ತು ಸುಸ್ತಿಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳಂತೆ ಕ್ರಮವಿಟ್ಟು ಸುಸ್ತಿದಾರರಿಗೆ ಸೇರಿದ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅಂತಿಮವಾಗಿ ದಿನಾಂಕ 17-08-2005 ರಂದು ಬಹಿರಂಗ ಹರಾಜಿಗೊಳಪಡಿಸಿದ್ದು, ಸದರಿ ದಿನದಂದು ಶ್ರೀಮತಿ ಹೆಚ್.ಸಿ. ವಸಂತಮ್ಮ ಕೋಂ ಶ್ರೀ ಚಂದ್ರಣ್ಣ, ಕೋನಸಾಗರ, ಮೊಳಕಾಲ್ಮೂರ್ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಇವರು ಅತಿ ಹೆಚ್ಚಿನ ಮೊತ್ತ ರೂ 4,10,000-00 (ನಾಲ್ಕು ಲಕ್ಷ ಹತ್ತು ಸಾವಿರ ಮಾತ್ರ)ಕ್ಕೆ ಬಿಡ್ ಮಾಡಿರುತ್ತಾರೆ ಅದರಂತೆ ಮಾರಾಟಾಧಿಕಾರಿಗಳು ಬಿಡ್‌ನ್ನು ಶ್ರೀಮತಿ ಹೆಚ್.ಸಿ. ವಸಂತಮ್ಮ ಕೋಂ ಶ್ರೀ ಚಂದ್ರಣ್ಣ, ಕೋನಸಾಗರ, ಮೊಳಕಾಲ್ಮೂರ್ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಇವರ ಹೆಸರಿಗೆ ನಿಲ್ಲಿಸಿ, ಮುಂದಿನ ಕ್ರಮಕ್ಕಾಗಿ ಹರಾಜಿನ ದಾಖಲೆಗಳನ್ನು ಉಲ್ಲೇಖ (2) ರ ರೀತ್ಯ ಈ ಕಛೇರಿಗೆ ಸಲ್ಲಿಸಿರುತ್ತಾರೆ. ಈ ಬಗ್ಗೆ ಸಾಲಗಾರರಾದ ಶ್ರೀ ಮೃತ್ಯುಂಜಯ ಬಿನ್ ಸಣ್ಣವೀರಪ್ಪ ಇವರಿಗೆ ಕಾನೂನು ರೀತ್ಯ ಅವರಿಂದ ಬ್ಯಾಂಕಿಗೆ ಬಾಕಿ ಇರುವ ಪೂರ್ಣ ಮೊತ್ತವನ್ನು 30 ದಿವಸಗಳೊಳಗೆ ಪಾವತಿಸಲು, ಪಾವತಿಸಿದಲ್ಲಿ ತಮ್ಮ ಆಸ್ತಿಯು ತಮಗೆ ಇರುವುದೆಂದು ತಪ್ಪಿದಲ್ಲಿ ಕರ್ನಾಟಕ ಸಹಕಾರ ಸಂಘಗಳ ನಿಯಮ 38(6) ರ ಅಡಿಯಲ್ಲಿ ಬಹಿರಂಗ ಹರಾಜಿನಲ್ಲಿ ಪಡೆದ ವ್ಯಕ್ತಿಯ ಹೆಸರಿಗೆ ಸದರಿ ಆಸ್ತಿಯನ್ನು ಸ್ಥಿರೀಕರಿಸಲಾಗುವುದೆಂದು ಮಾರಾಟಾಧಿಕಾರಿಗಳು ತಮ್ಮ ನೋಟೀಸ್ ದಿನಾಂಕ 17-08-2005 ರಂದು ನೀಡಲಾಗಿದ್ದರೂ, ಬ್ಯಾಂಕಿಗೆ ಬಾಕಿ ಇರುವ ಹಣವನ್ನು ಪಾವತಿಸದೇ ಆಸ್ತಿಯನ್ನು ಉಳಿಸಿಕೊಳ್ಳಲು ವಿಫಲರಾಗಿರುತ್ತಾರೆ.

ಅಲ್ಲದೇ ಸದರಿ ಶ್ರೀ ಮೃತ್ಯುಂಜಯ ಬಿನ್ ಸಣ್ಣವೀರಪ್ಪ ಇವರು ಉಲ್ಲೇಖ (1) ರ ರೀತ್ಯ ತಮ್ಮ ಆಕ್ಷೇಪಣಾ ಪತ್ರವನ್ನು ಸಲ್ಲಿಸಿರುತ್ತಾರೆ. ಸದರಿ ಆಕ್ಷೇಪಣಾ ಪತ್ರದ ಜೊತೆಗೆ ಆಕ್ಷೇಪಣೆಗಳಿಗೆ ಸಂಬಂಧಿಸಿದ ಯಾವುದೇ ದಾಖಲಾತಿಗಳನ್ನು ಲಗತ್ತಿಸದೆ ಆಕ್ಷೇಪಣೆಗಳನ್ನು ಮಾಡಿರುವುದಾಗಿದೆ.

ಉಲ್ಲೇಖ (3) ರ ರೀತ್ಯ ಈ ಕಛೇರಿಯಿಂದ ಅವರು ಮಾಡಿದ ಆಕ್ಷೇಪಣೆಗಳಿಗೆ ಸಂಬಂಧಿಸಿದ ದಾಖಲಾತಿಗಳನ್ನು ಸಲ್ಲಿಸಲು ಹಾಗೂ ಹೇಳಿಕೆಗಳನ್ನು ನೀಡಲು ಈ ಕಛೇರಿಯಲ್ಲಿ ದಿನಾಂಕ 22-10-2005 ರಂದು ಬೆಳಿಗ್ಗೆ 11.00 ಗಂಟೆಗೆ ಹಾಜರಾಗಲು ಅಂಚೆ ದೃಡೀಕರಣದೊಂದಿಗೆ ಕಳುಹಿಸಿಕೊಡಲಾಗಿತ್ತು. ಆದರೆ ಅವರು ಹಾಜರಾಗದೆ ಉಲ್ಲೇಖ (4) ರಲ್ಲಿರುವಂತೆ ಅವರ ಪತ್ರದಲ್ಲಿ ತಮಗೆ ಆರೋಗ್ಯ ಸರಿಯಿರುವುದಿಲ್ಲವೆಂದು ನೆಪ ಹೇಳಿ ಡಾಕ್ಟರ್ ರವರ ಮೆಡಿಕಲ್ ಸರ್ಟಿಫಿಕೇಟ್ ನೊಂದಿಗೆ 8-10 ದಿನಗಳ ಕಾಲಾವಕಾಶವನ್ನು ಕೋರಿದ್ದು, ಡಾಕ್ಟರ್‌ರವರು ಕೊಟ್ಟ ದಿನಾಂಕ 20-10-2005 ರ ಸರ್ಟೀಫಿಕೇಟ್‌ನ್ನು ಪರೀಶೀಲಿಸಿದಾಗ ಐದು ದಿನಗಳ ವಿಶ್ರಾಂತಿಗೆ ಮಾತ್ರ ಸಲಹೆ ನೀಡಿರುವುದು ಕಂಡು ಬರುತ್ತದೆ. ಅವರು ಕೋರಿದ ರೀತ್ಯಾ ಮತ್ತೆ ಕಾಲಾವಕಾಶವನ್ನು ಉಪಯೋಗಿಸಿಕೊಂಡು ಸಹ ತಮ್ಮ ಆಕ್ಷೇಪಣೆಗಳಿಗೆ ದಾಖಲಾತಿಗಳನ್ನು ಸಲ್ಲಿಸಲು ಹಾಗೂ ಹೇಳಿಕೆಗಳನ್ನು ನೀಡಲು ವಿಫಲರಾಗಿರುವುದಲ್ಲದೆ ಪುನ: ತಮ್ಮ ಪತ್ರದ ದಿನಾಂಕ 28-10-2005 ರಲ್ಲಿ ತಮ್ಮ ಆರೋಗ್ಯ ಸುಧಾರಿಸದೆ ಇರುವುದರಿಂದ ಮತ್ತೆ ಕೆಲವು ದಿನಗಳ ಕಾಲಾವಕಾಶ ನೀಡಬೇಕೆಂದು ಕೋರಿರುತ್ತಾರೆ. ಇದೆನ್ನೆಲ್ಲಾ ಗಮನಿಸಿದಾಗ ಉದ್ದೇಶಪೂರ್ವಕವಾಗಿ ಅನಾರೋಗ್ಯದ ನೆಪಗಳನ್ನುಡ್ಡುತ್ತಿರುವು ದೆಂದೆನಿಸುವುದಲ್ಲದೆ ಅವರಿಗೆ ಈ ಬಗ್ಗೆ ಆಸಕ್ತಿಯಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಉಲ್ಲೇಖ (5) ರ ಪತ್ರದಲ್ಲಿ ಡಿಕ್ರಿದಾರ ಬ್ಯಾಂಕಿನವರು ಸಹ ರೂ. 4,10,000-00 (ನಾಲ್ಕು ಲಕ್ಷದ ಹತ್ತು ಸಾವಿರ ) ಮಾತ್ರ ಬಿಡ್ ಮೊತ್ತವನ್ನು ನಿಗದಿತ ಅವಧಿ ಒಳಗೆ ಹಣ ಬ್ಯಾಂಕಿಗೆ ಪಾವತಿಯಾಗದಿದ್ದರೂ, ಸದರಿ ಬಹಿರಂಗ ಹರಾಜನ್ನು ದೃಢೀಕರಿಸಲು ಕಾರಣಗಳೊಂದಿಗೆ ಕೋರಿರುತ್ತಾರೆ.

ಮೇಲ್ಕಂಡ ಎಲ್ಲಾ ಕಾರಣಗಳಿಂದ ಸದರಿ ಶ್ರೀ ಮೃತ್ಯುಂಜಯ ಬಿನ್ ಸಣ್ಣವೀರಪ್ಪ ಇವರು ನೀಡಿರುವ ಆಕ್ಷೇಪಣಾ ಪತ್ರವನ್ನು ರದ್ದುಗೊಳಿಸಿ, ಬ್ಯಾಂಕಿನ ಮಾರಾಟಾಧಿಕಾರಿಗಳು ಚಿತ್ರದುರ್ಗ ಶಾಖೆ, ಇವರು ಸದರಿ ಮಾರಾಟ ಸ್ಥಿರೀಕರಣಕ್ಕೆ ಕೋರಿ ಸಲ್ಲಿಸಿದ ಪ್ರಸ್ತಾವನೆಯಂತೆ, ಕಾನೂನು ರೀತ್ಯಾ ಕ್ರಮ ಜರುಗಿಸಿರುವುದು ಕಂಡು ಬಂದಿರುತ್ತೆ ಅದ್ದರಿಂದ ಈ ಕೆಳಕಂಡ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸಹಕಾರ ಸಂಘಗಳ ನಿಯಮ 1960 ನಿಯಮ 38(6)(ಎ) ಅನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ ನಿಯಮ 441, ಕರ್ನಾಟಕರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು ಆದ ನಾನು, ಶ್ರೀ ಮೃತುಂಜಯ ಬಿನ್ ಸಣ್ಣವೀರಪ್ಪ ಮೆ: ಎಸ್.ಎ.ಟ್ರೇಡಿಂಗ್ ಕಂಪನಿ, ಚಳ್ಳಕೆರೆ ಇವರಿಗೆ ಸೇರಿದ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು

ದಿನಾಂಕ 17-08-2005ರ ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಮೊತ್ತ ರೂ.4,10,000-00 (ನಾಲ್ಕು ಲಕ್ಷ ಹತ್ತು ಸಾವಿರ ಮಾತ್ರ) ಕ್ಕೆ ಬಿಡ್ ಮಾಡಿದ್ದ ಶ್ರೀಮತಿ ಹೆಚ್.ಸಿ. ವಸಂತಮ್ಮ ಕೋಂ ಶ್ರೀ ಚಂದ್ರಣ್ಣ, ಕೋನಸಾಗರ, ಮೊಳಕಾಲ್ಮೂರ್ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಇವರ ಹೆಸರಿಗೆ ಈ ಕೂಡಲೇ ಜಾರಿಗೆ ಬರುವಂತೆ ಎಲ್ಲಾ ಹಕ್ಕು ಸ್ವಾಮ್ಯ ಪತ್ರಗಳನ್ನು ವರ್ಗಾವಣೆ ಮಾಡಿ ಮಾರಾಟ ಸ್ಥಿರೀಕರಣದ ಆದೇಶವನ್ನು ನೀಡಿರುತ್ತೇನೆ.

**ಷೆಡ್ಯೂಲ್ ಸ್ಥಿರಾಸ್ತಿಯ ವಿವರ**

ಖಾತಾ ನಂ 6205/ A : ಎಸಿಸಿ ರೂಫಿಂಗ್ ಆಯಿಲ್ ಮಿಲ್ ಬಿಲ್ಡಿಂಗ್ ಮತ್ತು ಖಾಲಿ ಜಾಗ, ಒಂದನೇ ಡಿವಿಜನ್, ಪಾವಗಡ ರಸ್ತೆ, ಚಳ್ಳಕೆರೆ, ವಿಸ್ತೀರ್ಣ ಪೂರ್ವ- ಪಶ್ಚಿಮ 320 ಉತ್ತರ-ದಕ್ಷಿಣ 150+75/2

**ಚೆಕ್ಕುಬಂದಿ**

| | | |
|---|---|---|
| ಪೂರ್ವಕ್ಕೆ | : | ಉಳಿದ ಜಾಗ, ನಂ. 52 : 1B |
| ಪಶ್ಚಿಮಕ್ಕೆ | : | ಕಾಟ್ಟಪ್ಪನಹಟ್ಟಿ ರಸ್ತೆ, |
| ಉತ್ತರಕ್ಕೆ | : | ಖಾಲಿ ನಿವೇಶನ ನಂ.52/B |
| ದಕ್ಷಿಣಕ್ಕೆ | : | ಪಾವಗಡ ರಸ್ತೆ, |

ಮೇಲ್ಕಂಡ ಸ್ಥಿರಾಸ್ತಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸ ಬೇಕಾಗಿರುವ ಪೂರ್ಣ ಸಾಲ ವಸೂಲಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ದಿನಾಂಕ 14.11.2005 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಾಧಿಕಾರಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ, ಬೆಂಗಳೂರು.

ಪಿ.ಆರ್. ನಂ. 1804

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ

**ನಂ. ಡಿ.ಆರ್:ಡಿವಿಜಿ:ಎಲ್‌ಕ್ಯೂಡಿ:40:2002-03, ದಿನಾಂಕ: 18ನೇ ಅಕ್ಟೋಬರ್ 2005**

**ವಿಷಯ :** ಸ್ಥಗಿತಗೊಂಡಿರುವ ಇಲಾಖೆ ಮಂಡಕ್ಕಿ ಮತ್ತು ಅವಲಕ್ಕಿ ಉತ್ಪಾದಕರ ಸಹಕಾರ ಸಂಘ ನಿ ದಾವಣಗೆರೆ ಇದನ್ನು 1959ನೇ ಸಾಲಿನಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ 10:10:2002.
2) ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮ ಸಂಖ್ಯೆ ದಿನಾಂಕ 25:10:2002.
3) ಸಹಕಾರ ಸಂಘಗಳ ನಿರೀಕ್ಷಕರು, ದಾವಣಗೆರೆ ಇವರ ಪತ್ರದ ದಿನಾಂಕ 21:1:2003.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಮಧಕರು ದಾವಣಗೆರೆ ಇವರು ಉಲ್ಲೇಖ(1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಿಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ. ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2) ರಲ್ಲಿ ನೋಟೀಸು ನೀಡಿದ್ದು ಈ ಸಂಘದ ಅಸ್ತಿತ್ವವನ್ನು ದಾವಣಗೆರೆ ನಗರದಲ್ಲಿ ಇರುವುದಿಲ್ಲವೆಂದು ಮತ್ತು ಸಂಘದ ನಿರ್ದೇಶಕರು: ಕಾರ್ಯದರ್ಶಿ ಬಗ್ಗೆ ಮಾಹಿತಿಯು ಸಿಗುತ್ತಿಲ್ಲವೆಂದು, ಉಲ್ಲೇಖ 3ರ ಪ್ರಕಾರ, ಸಹಕಾರ ಸಂಘದ ನಿರೀಕ್ಷಕರು ದಾವಣಗೆರೆ ಇವರು ವರದಿ ಮಾಡಿದ್ದು, ಈ ನೋಟೀಸುಗಳನ್ನು ವಾಪಾಸು ಈ ಕಛೇರಿಗೆ ಸಲ್ಲಿಸಿ, ಈ ಸಂಘವನ್ನು ಸಮಾಪನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವನ್ನು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರೆಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅದೋಗತಿಗೆ ಹೋಗಲಿರುವ ಸಂಭವವಿರುವುದರಿಂದ, ಸಮಾಪನಗೊಳಿಸುವುದೇ ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72(2)ರನ್ವಯ, ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ: 69:ಸಿಎಲ್‌ಎಂ: 2001: ದಿನಾಂಕ 21:11:2001ರ ಪ್ರಕಾರ, ದತ್ತವಾಗಿರುವ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಕೆ.ಎಂ.ಆಶಾ, ಕೆ.ಸಿ.ಎಸ್. ಆದ ನಾನು, ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಇಲಾಖೆ ಮಂಡಕ್ಕಿ ಮತ್ತು ಅವಲಕ್ಕಿ ಉತ್ಪಾದಕರ ಸಹಕಾರ ಸಂಘ ನಿ ದಾವಣಗೆರೆ, ತಾ. ಇದನ್ನು ಸಮಾಪನಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 73 (1) ರ ಅನ್ವಯ ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು, ಸಂಘದ ವಿಶಿಷ್ಠ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ 18:10:2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 1805 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ.

## ಆಯುಕ್ತರು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಬೆಂಗಳೂರು ಇವರ ನಡವಳಿ

**ವಿಷಯ:** ಶ್ರೀ ಎಸ್.ಬಿ. ಕೌಂಬಳೆ ಬಾಂದುಜವಾನ (ಈ ಹಿಂದಿನ ತಾಲ್ಲೂಕು ಭೂ ಮಾಪನ ಕಛೇರಿ ಹಳಿಯಾಳ) ಹಿಂದಿನ ಭೂ.ಸ.ನಿ.ಕಾರವಾರ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತು ಕ್ರಮದ ಅಂತಿಮ ಆದೇಶ ಹೊರಡಿಸುವ ವಿಚಾರ ಕುರಿತು.

**ಉಲ್ಲೇಖ:** 1) ಈ ಹಿಂದಿನ ಭೂ.ಜಂ.ನಿ. ಬೆಳಗಾಂ ಇವರ ಕಾರಣ ಕೇಳಿ ನೋಟೀಸ್ (ಆರೋಪ ಪಟ್ಟಿ ಅನುಬಂಧ 1 ರಿಂದ 4 ರೊಂದಿಗೆ) ಸಂ: ಸಿಬ್ಬಂದಿ ಶಿಸ್ತು. 33: 2002-2003 ದಿನಾಂಕ : 21-10-2002.
2) ಈ ಹಿಂದಿನ ಭೂ ದಾಖಲೆಗಳ ಜಂಟಿ ನಿರ್ದೇಶಕರು ಬೆಳಗಾಂ ಇವರ ವಿಚಾರಣಾ ವರದಿ ಸಂ: ಸಿಬ್ಬಂದಿ. ಶಿಸ್ತು. 33 : 2002-2003 ದಿನಾಂಕ 1: 6-10-2003.

3) ಈ ಹಿಂದಿನ ಭೂ ದಾಖಲೆಗಳ ಜಂಟಿ ನಿರ್ದೇಶಕರು ಬೆಳಗಾಂ ರವರ ಎರಡನೇ ಕಾರಣ ಕೇಳಿ ನೋಟೀಸು ಸಂ. ಸಿಬ್ಬಂದಿ. ಶಿಸ್ತು. 33: 2002-2003 ದಿನಾಂಕ 1: 6-11-2003.
4) ಸರ್ಕಾರದ ಸುತ್ತೋಲೆ ಸಂ: ಸಿ.ಆ.ಸು.ಇ.18.ಸೇ.ಇ.ವಿ. 2001 ದಿನಾಂಕ : 14-9-2001.

**ಪ್ರಸ್ತಾವನೆ:**

ಈ ಕಛೇಒರಿಯ ಅಧಿಕೃತ ಜ್ಞಾಪನ ಸಂಖ್ಯೆ : ಸಿಬ್ಬಂದಿ. ಸಿಜಿ.ಎಪಿಟಿ. 15: 93-94 ದಿನಾಂಕ: 18-9-95 ರಲ್ಲಿ ಅನುಕಂಪ ಆಧಾರದ ಮೇಲೆ ನೇಮಕಗೊಂಡು ಈ ಹಿಂದಿನ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಕಾರವಾರ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಎಸ್.ಜಿ. ಕಾಂಬಳೆ, ಬಾಂದುಜವಾನರು ದಿನಾಂಕ: 1-4-2002 ರಿಂದ ಈ ವರೆಗೆ ಸರ್ಕಾರಿ ಕೆಲಸದಿಂದ ಅನಧಿಕೃತವಾಗಿ ಗೈರು ಹಾಜರಾದ ಬಗ್ಗೆ ದೋಷಾರೋಪಣೆಯನ್ನು (ಅನುಬಂಧ 1 ರಿಂದ 4) ಈ ಹಿಂದಿನ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಳಗಾಂ ರವರು ಕಾರಣ ಕೇಳಿ ನೋಟೀಸ್ ನೊಂದಿಗೆ ದಿನಾಂಕ: 21-10-2002 ರಂದು ಹೊರಡಿಸಿರುವುದನ್ನು ಶ್ರೀ ಎಸ್.ಜಿ. ಕಾಂಬಳೆ, ಬಾಂದು ಜವಾನರು ದಿನಾಂಕ:26-10-2002 ರಂದು ಸ್ವೀಕರಿಸಿರುತ್ತಾರೆ. ಇದಕ್ಕೆ ಉತ್ತರವಾಗಿ ಪ್ರತಿ ರಕ್ಷಣಾ ಹೇಳಿಕೆಯನ್ನು ದಿನಾಂಕ: 9-1-2003 ರಂದು ಸಲ್ಲಿಸಿದ್ದು ಅವರ ವಿರುದ್ಧ ಮಾಡಲಾದ ಆರೋಪಗಳನ್ನು ಒಪ್ಪಿಕೊಳ್ಳದೆ ಇದ್ದುದರಿಂದ ಆರೋಪದ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳುವ ಸಲುವಾಗಿ ಈ ಹಿಂದಿನ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಳಗಾಂ ಇವರ ನಡವಳಿ ದಿನಾಂಕ: 20-5-2003 ರಲ್ಲಿ ಸ್ವತ: ಈ ಹಿಂದಿನ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಳಗಾಂ ಇವರು ವಿಚಾರಣಾಧಿಕಾರಿಯಾಗಿ ಹಾಗೂ ಹಿಂದಿನ ಭೂದಾಖಲೆಗಳ ಜಂಟಿ ನಿರ್ದೇಶಕರು ಜಂಟಿ ನಿರ್ದೇಶಕರು, ಬೆಳಗಾಂ ಕಛೇರಿಯ ಹಿಂದಿನ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಆಡಳಿತ) ಇವರನ್ನು ಮುಂದಿನಾಧಿಕಾರಿಯಾಗಿ ನೇಮಕ ಮಾಡಿರುತ್ತಾರೆ. ಅದರಂತೆ ಈ ಹಿಂದಿನ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಳಗಾಂ ಇವರು ವಿಚಾರಣೆ ಕೈಗೊಂಡು ವಿಚಾರಣಾ ವರದಿ ದಿನಾಂಕ:1:6-10-2003 ರಲ್ಲಿ ಸದರೀ ಆರೋಪ ನೌಕರರು ವಿಚಾರಣೆಯು ಮುಂಚೆ ಬೇರೆ ತರಹಗಳ ಹೇಳಿಕೆಯನ್ನು ಮತ್ತು ವಿಚಾರಣೆ ಸಮಯದಲ್ಲಿ ನೀಡಿರುವ ಹೇಳಿಕೆಯು ವ್ಯತ್ಯಾಸದಿಂದ ಕೂಡಿದೆ ಎಂದು ವರದಿ ಸಲ್ಲಿಸಿರುತ್ತಾರೆ ಹಾಗೂ ಆಪಾದಿತ ನೌಕರರಿಗೆ ಸಾಕಷ್ಟು ಸಲ ಕಛೇರಿಗೆ ಹಜರಾಗಲು ಅವಕಾಶವನ್ನು ನೀಡಲಾಗಿದ್ದರೂ ಸಹ, ತನ್ನ ನಿರ್ಲಕ್ಷ್ಯದಿಂದಲೇ ಆಪಾದಿತ ನೌಕರರು ಸರ್ಕಾರಿ ಕೆಲಸಕ್ಕೆ ಮರಳಿ ಬಂದಿರುವುದಿಲ್ಲ. ಇದರಿಂದಾಗಿ ನೌಕರರ ಮೇಲಿನ ಅನಧಿಕೃತ ಗೈರು ಹಾಜರಿ ಆಪಾದನೆ ರುಜುವಾತಾಗಿದೆ ಎಂದು ವಿಚಾರಣಾ ವರದಿಯಲ್ಲಿ ಸ್ಪಷ್ಟವಾಗಿ ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಯವರ ವಿಚಾರಣಾ ವರದಿಯ ಪ್ರತಿಯೊಂದನ್ನು ಆರೋಪಿತ ನೌಕರರಿಗೆ ಎರಡನೇ ಕಾರಣ ಕೇಳಿ ನೋಟೀಸ್ ನೊಂದಿಗೆ ದಿನಾಂಕ:9:10-2003 ರಂದು ಜಾರಿಗೊಳಿಸಲಾಗಿದೆ. ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ಸೂಚಿಸಿದ್ದಾಗ್ಯೂ ನಿಗದಿಪಡಿಸಿದ ಮತ್ತು ಅನಂತರದ ಅವಧಿಯಲ್ಲಿ ಅಂದರೆ ಈ ತಹಲ್‌ವರೆಗೂ ಸರ್ಕಾರಿ ಕೆಲಸಕ್ಕೆ ಹಾಜರಾಗದೆ ಯಾವುದೇ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಸದರಿ ಆರೋಪಿತ ನೌಕರರು ಕೆ.ಸಿ.ಎಸ್. ಆರ್. ನಿಯಮ 108 ಅನ್ನು ಆಕರ್ಷಿಸಿರುತ್ತಾರೆ. ಅಲ್ಲದೆ ಸರ್ಕಾರದ ಸುತ್ತೋಲೆ ಸಂಖ್ಯೆ : ಸಿ.ಆ.ಸು.ಇ. 18ನೇ ಇವಿ. 2001 ದಿನಾಂಕ: 14-9-2001 ರಲ್ಲಿ 4 ತಿಂಗಳು ಮೀರಿದ ಅನಧಿಕೃತ ಗೈರು ಹಾಜರಾದ ನೌಕರರನ್ನು ವಿಚಾರಣೆಗೆ ಒಳಪಡಿಸಿ ಸೇವೆಯಿಂದ ವಜಾ ಗೊಳಿಸುವ ಬಗ್ಗೆ ಸ್ಪಷ್ಟ ನಿರ್ದೇಶನವಿರುತ್ತದೆ.

ಮೇಲ್ಕಂಡಂತೆ ವಿವರಿಸಿರುವ ಸಂದರ್ಭದಲ್ಲಿ ದಿನಾಂಕ: 1:6-10-2003 ರಂದು ಪ್ರಕರಣದ ವಿಚಾರಣಾಧಿಕಾರಿಯಾದ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಳಗಾಂ ರವರು ಸಲ್ಲಿಸಿರುವ ವಿಚಾರಣಾ ವದರಿ ಹಾಗೂ ವಿಚಾರಣಾ ದಾಖಲಾತಿಗಳನ್ನು ಪರಿಶೀಲಿಸಲಾಗಿ ಆರೋಪಿ ನೌಕರರು ದಿನಾಂಕ:1-4-2002 ರಿಂದ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿರುವುದರ ಬಗ್ಗೆ ಆರೋಪ ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಯವರ ಅಭಿಪ್ರಾಯ ಪಟ್ಟಿರುವುದನ್ನು ಒಪ್ಪಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ : ಸಿಬ್ಬಂದಿ. ಶಿಸ್ತು. 4:2004-2005, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ / 3ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ ಸದರೀ ನೌಕರರು ದಿನಾಂಕ 01-04-2002 ರಿಂದ ಇದುವರೆವಿಗೂ ಅನಧಿಕೃತ ಗೈರು ಹಾಜರಾಗಿ ಕರ್ನಾಟಕ ನಾಗರೀಕ ಸೇವಾ ನಿಯಾಮಾವಳಿ ನಿಯಮ 106 ಮತ್ತು 107ರ ನಿಯಮಗಳನ್ನು ಉಲ್ಲಂಘಿಸಿ ನಿಯಮ 108ರ ಪ್ರಕಾರ ಸೇವೆಯಿಂದ ವಜಾಗೊಳ್ಳಲು ಅನುವು ಮಾಡಿಕೊಟ್ಟಿರುತ್ತಾರೆ. ಆ ಕಾರಣ ಜಿ.ವಿ.ರಾಮಚಂದ್ರ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 9(3) ರೊಂದಿಗೆ ಓದಿಕೊಂಡು ನಿಯಮ 8 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜಿ.ಎಸ್.ಕಾಂಬಳೆ, ಬಾಂದುಜವಾನರು (ಹಿಂದಿನ ಭೂದಾಖಲೆಗಳ ಸಹಾಯಕ ನಿರ್ದೇಶಕರು) ತಹಶೀಲ್ದಾರ್, ಕಾರವಾರ ಇವರನ್ನು ಸೇವೆಯಿಂದ ವಜಾ ಮಾಡಿ ಆದೇಶಿಸಿದೆ

.

ಆಯುಕ್ತರು,
ಪಿ.ಆರ್. 1806 ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳು, ಬೆಂಗಳೂರು.

## ಕೃಷಿ ಮತ್ತು ತೋಟಗಾರಿಕೆ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಕೃತೋಇ 66 ಕೃತೋಸ 2005, ದಿನಾಂಕ: 24ನೇ ಅಕ್ಟೋಬರ್ 2005**

ರಾಜ್ಯದ 5ನೇ ವೇತನ ಆಯೋಗವು ಪರಿಶೀಲನೆಗೆ ವಿಶೇಷ ಭತ್ಯೆ ಮತ್ತು ಇತರೆ ಭತ್ಯೆಗಳ ಪರಿಷ್ಕರಣ, ನಿವೃತ್ತಿ ಸೌಲಭ್ಯ, ಪ್ರಯಾಣ ರಿಯಾಯಿತಿ, ವೈದ್ಯಕೀಯ ಚಿಕಿತ್ಸೆಯ ಸೌಲಭ್ಯಗಳನ್ನು ಪರಿಶೀಲಿಸಬೇಕಾದ ವಿಷಯಗಳ ಬಗೆ ಅಂಕಿ ಅಂಶಗಳನ್ನು ಮತ್ತು ಇತರ ಮಾಹಿತಿಯನ್ನು ಸಂಗ್ರಹಿಸಲು ಅನುಕೂಲವಾಗಲು ಕೃಷಿ ಮತ್ತು ತೋಟಗಾರಿಕೆ ಇಲಾಖೆಯಿಂದ ಸರ್ಕಾರದ ಅಧೀನ ಕಾರ್ಯದರ್ಶಿ (ಕೃಷಿ ಯೋಜನೆ) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕೃಷಿ ಮತ್ತು ತೋಟಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ಸಂಪರ್ಕಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1730 **ಜಿ.ಕೆ. ಗುರಾಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ

**ವಿಷಯ :** ಸ್ಥಗಿತಗೊಂಡಿರುವ ನಿಜಲಿಂಗಪ್ಪ ಪ್ರಾಥಮಿಕ ಬಳಕೆದಾರರ ಸಹಕಾರ ಸಂಘ ನಿ, ದಾವಣಗೆರೆ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ: 14.10.2005.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ: 26.10.2005.
3) ಸಹಕಾರ ಸಂಘಗಳ ನಿರೀಕ್ಷಕರು, ದಾವಣಗೆರೆ 2ನೇ ವೃತ್ತ ಇವರ ಪತ್ರ ದಿನಾಂಕ: 27.12.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ(1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ. ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2) ರಲ್ಲಿ ನೋಟೀಸು ನೀಡಿದ್ದು, ಸಂಘದ ಆಡಳಿತ ಮಂಡಳಿ ನಿರ್ದೇಶಕರ ವಿಳಾಸ ಲಭ್ಯವಿಲ್ಲದೇ ಇದ್ದು, ಸಂಘದ ಅಸ್ತಿತ್ವ ಬಗ್ಗೆ ತಿಳಿದು ಬಂದಿರುವುದಿಲ್ಲವೆಂದು ಉಲ್ಲೇಖ (3) ರಲ್ಲಿ ಸಹಕಾರ ಸಂಘಗಳ ನಿರೀಕ್ಷಕರು, ದಾವಣಗೆರೆ 2ನೇ ವೃತ್ತ ಇವರು ವರದಿಮಾಡಿರುತ್ತಾರೆ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವು ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ ನಂ. ಡಿಆರ್/ಡಿವಿಜಿ/ಎಲ್‌ಕ್ಯೂಡಿ/19/2005-06, ದಿನಾಂಕ: 6ನೇ ಜನವರಿ 2006

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72(2)ರನ್ವಯ, ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ: 69:ಸಿಎಲ್‌ಎಂ: 2001: ದಿನಾಂಕ 21.11.2001ರ ಪ್ರಕಾರ, ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಕೆ.ಎಂ.ಆಶಾ, ಕೆ.ಸಿ.ಎಸ್. ಆದ ನಾನು, ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ನಿಜಲಿಂಗಪ್ಪ ಪ್ರಾಥಮಿಕ ಬಳಕೆದಾರರ ಸಹಕಾರ ಸಂಘ ನಿ ದಾವಣಗೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 73 (1) ರ ಅನ್ವಯ ಸಹಕಾರ ಸಂಘಗಳ ನಿರೀಕ್ಷಕರು, ದಾವಣಗೆರೆ 2ನೇ ವೃತ್ತ, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು, ಸಂಘದ ವಿಶಿಷ್ಠ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ 6.1.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 94 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ

**ವಿಷಯ :** ಸಮಾಪನಾ ಆದೇಶಿತ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಬಂಕವಳ್ಳಿ, ಸೊರಬ ತಾಲ್ಲೂಕು ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/50/83/2005-06, ದಿನಾಂಕ: 11.08.2005.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ: ಎಆರ್ 25/ಸಮಾಪನೆ/ಸಿಆರ್-/2005-06, ದಿನಾಂಕ: 25.11.2005.

ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಬಂಕವಳ್ಳಿ, ಸೊರಬ ತಾಲ್ಲೂಕು, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೋಂದಣಿ ನಂ. ಸಸಂಸನಿ-25/ನೋಂದಣಿ/ಸಿಆರ್-189/29498/2000-01, ದಿನಾಂಕ: 20.10.2000 ರಲ್ಲಿ ನೋಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ, ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ, ಸೊರಬ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 05.09.2005 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಏನೂ ಇರುವುದಿಲ್ಲವೆಂದು, ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ: 23.11.2005 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದವರು ಮಹಾಸಭೆ ನಡೆಸಿ ನೋಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ. ಈ ಸಂಘದಲ್ಲಿ ಸದಸ್ಯತ್ವ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಉಲ್ಲೇಖ (2)ರ ಪತ್ರದಲ್ಲಿ ನೋಂದಣಿ ರದ್ದತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2) ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ. ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

### ಆದೇಶ ನಂ. ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/50/83/2005-06/1587, ದಿನಾಂಕ: 25ನೇ ನವೆಂಬರ್ 2005

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ/69/ಸಿಎಲ್‌ಎಂ/2000, ದಿನಾಂಕ: 21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ, ಬಂಕವಳ್ಳಿ, ಸೊರಬ ತಾಲ್ಲೂಕು ಇದರ ನೋಂದಣಿ ನಂ.ಸಸಂಸನಿ-25/ನೋಂದಣಿ/ಸಿಆರ್-189/29498/2000-01, ದಿನಾಂಕ: 20.10.2000ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 25.11.2005 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 95 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**GOVERNMENT OF KARNATAKA**
**DIRECTORATE OF ECONOMICS & STATISTICS BANGALORE-1**
**Consumer Price Index Numbers for Industrial Workers**

No. DES 23 PWX 2005
State: Karnataka
Base: 1987-88=100
Month: August 2005
Date : 29-10-2005

| | Group/Sub-Group | Bell-ary | Bha-dra-vathi | Da-van-gere | Dan-deli | Gul-ba-rga | Hari-har | Has-san | Man-dya | Man-ga-lore | My-sore | Rai-chur | Tum-kur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD:**<br>(a) Cereals & Products | 332 | 406 | 375 | 334 | 355 | 352 | 336 | 361 | 292 | 376 | 329 | 390 |
| | (b) Pulses & Products | 251 | 337 | 323 | 372 | 312 | 305 | 333 | 328 | 327 | 322 | 319 | 307 |
| | (c) Oils & Fats | 240 | 248 | 247 | 248 | 262 | 249 | 258 | 262 | 236 | 257 | 255 | 247 |
| | (d) Meat, Fish & Eggs | 347 | 382 | 367 | 478 | 403 | 341 | 336 | 375 | 558 | 409 | 400 | 349 |
| | (e) Milk & Products | 343 | 263 | 318 | 323 | 303 | 267 | 251 | 342 | 289 | 257 | 307 | 281 |
| | (f) Condiments & Spices | 239 | 337 | 359 | 391 | 279 | 269 | 296 | 242 | 260 | 318 | 246 | 275 |
| | (g) Vegetables & Fruits | 253 | 321 | 295 | 385 | 315 | 294 | 325 | 381 | 264 | 257 | 230 | 363 |
| | (h) Other Food | 299 | 375 | 361 | 367 | 310 | 316 | 328 | 308 | 289 | 308 | 326 | 342 |
| | **FOOD GROUP INDEX** | **301** | **353** | **345** | **355** | **324** | **309** | **315** | **340** | **329** | **321** | **313** | **336** |
| II. | Pan, Supari, Tobacco & Intoxicants | 310 | 345 | 364 | 342 | 386 | 441 | 348 | 475 | 295 | 323 | 352 | 402 |
| III. | Fuel & Light | 312 | 321 | 273 | 457 | 290 | 326 | 354 | 333 | 272 | 310 | 376 | 289 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 255 | 229 | 373 | 277 | 263 | 347 | 382 | 242 | 294 | 405 | 211 |
| VI. | **MISCELLANEOUS:**<br>(a) Medical Care | 585 | 511 | 372 | 291 | 288 | 268 | 385 | 317 | 336 | 298 | 394 | 224 |
| | (b) Education, Recreation & Amusement | 349 | 337 | 521 | 217 | 391 | 474 | 324 | 293 | 364 | 455 | 376 | 370 |
| | (c) Transport & Communication | 415 | 406 | 332 | 526 | 595 | 404 | 365 | 560 | 458 | 572 | 388 | 388 |
| | (d) Personal Care & effects | 257 | 280 | 257 | 280 | 315 | 257 | 289 | 290 | 270 | 316 | 266 | 275 |
| | (e) Others | 331 | 351 | 283 | 428 | 297 | 273 | 289 | 286 | 235 | 300 | 426 | 255 |
| | Miscellaneous Group | 371 | 347 | 335 | 328 | 351 | 323 | 320 | 305 | 323 | 389 | 363 | 291 |
| | **GENERAL INDEX** | **286** | **312** | **298** | **336** | **295** | **285** | **297** | **315** | **293** | **296** | **313** | **274** |
| | To convert to Base 1960 Multiply by Linking Factor. | 7.39 | 9.19 | 8.27 | ... | 8.26 | 8.56 | 9.25 | 7.92 | 9.31 | 9.05 | ... | ... |

ಜಂಟಿ ನಿರ್ದೇಶಕರು,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಬೆಂಗಳೂರು.

**GOVERNMENT OF INDIA**
**MINISTRY OF LABOUR**
**LABOUR BUREAU**
**'Cleremount' Shimla-171004 Dated:**
**CONSUMER PRICE INDEX NUMBERS FOR INDUSTRIAL WORKERS**

State: Karnataka (Base: 1982=100) Month: August 2005

| Code | | Group/Sub-group/Centre | Bangalore | Belgaum | Hubli Dharwar | Mercara |
|---|---|---|---|---|---|---|
| 1000 | IA. | **FOOD:** | | | | |
| 1100 | | (a) Cereals & Products | 429 | 541 | 440 | 443 |
| 1200 | | (b) Pulses & Products | 579 | 542 | 548 | 598 |
| 1300 | | (c) Oils & Fats | 398 | 369 | 372 | 426 |
| 1400 | | (d) Meat, Fish & Eggs | 685 | 614 | 671 | 585 |
| 1500 | | (e) Milk & Products | 379 | 530 | 442 | 461 |

| Code | | Group/Sub-group/Centre | Bangalore | Belgaum | Hubli Dharwar | Mercara |
|---|---|---|---|---|---|---|
| 1600 | | (f) Condiments & Spices | 512 | 663 | 626 | 477 |
| 1700 | | (g) Vegetables & Fruits | 530 | 628 | 677 | 494 |
| 1800 | | (h) Other Food | 796 | 773 | 717 | 766 |
| 1000 | | **FOOD GROUP** | 536 | 589 | 539 | 529 |
| 2000 | I. | Pan, Supari, Tobacco & Intoxicants | 658 | 612 | 587 | 529 |
| 3000 | II. | Fuel & Light | 872 | 681 | 598 | 431 |
| 4000 | III. | Housing Index | 630 | 797 | 561 | 200 |
| 5000 | IV. | Clothing, Bedding & Footwear | 285 | 290 | 327 | 438 |
| 6000 | V. | **Miscellaneous:** | | | | |
| 6100 | | (a) Medical Care | 436 | 527 | 468 | 347 |
| 6200 | | (b) Education, Recreation & Amusement | 501 | 744 | 636 | 617 |
| 6300 | | (c) Transport & Communication | 809 | 522 | 785 | 888 |
| 6400 | | (d) Personal Care & effects | 492 | 484 | 516 | 471 |
| 6500 | | (e) Others | 523 | 595 | 460 | 478 |
| 6600 | | Miscellaneous Group | 551 | 563 | 537 | 510 |
| | | **GENERAL INDEX** | **540** | **597** | **548** | **492** |

ಜಂಟಿ ನಿರ್ದೇಶಕರು,

ಪಿ.ಆರ್. 1734 ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್

**ವಿಷಯ :** ಸ್ಥಗೀತಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಚಿಲ್ಲರ್ಗಿ ತಾ: ಬೀದರ್,** ಇದನ್ನು ಸಹಕಾರ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/ಸಿಆರ್-/2005-2006, ದಿನಾಂಕ: 10.10.2005.

2) ವಾರ್ತಾ ಪತ್ರಿಕೆಯಲ್ಲಿ ಪ್ರಕಟಣೆ ದಿನಾಂಕ: 27.8.2005 ಹಾಗೂ 29.08.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರು ನೋಂದಣಿ ಸಂಖ್ಯೆ: ಸನಿಬಿ1/ವಿ4/18313/1983-84, ದಿನಾಂಕ: 01.02.1984 ರಲ್ಲಿ ನೋಂದಣಿ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಚಿಲ್ಲರ್ಗಿ ತಾ: ಬೀದರ್,** ಈ ಸಂಘವು ಸುಮಾರು ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆ ಗೊಳಿಸಲು ಉಲ್ಲೇಖ (1)ರ ಮುಖೇನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಉಲ್ಲೇಖ (2) ರನ್ವಯ ಸಂಘದ ಸಮಾಪನೆ : ರದ್ದತಿ ಬಗ್ಗೆ ದಿನ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಲಾಗಿ ಯಾರಿಂದಲೂ ಯಾವುದೇ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೆಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೇ ರೀತಿಯ ಪ್ರಯೋಜನೆ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ್ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನೆಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್-/2005-06/2820, ದಿನಾಂಕ: 21ನೇ / 25ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/200, ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ.ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್ ಜಿಲ್ಲೆ, ಬೀದರ್ ಆದ ನಾನು ಸ್ಥಗೀತಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಚಿಲ್ಲರ್ಗಿ ತಾ: ಬೀದರ್,** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ **ನಿರೀಕ್ಷಕರು, ಬೀದರ್ ತಾಲ್ಲೂಕು** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ - ಜವಾಬ್ದಾರಿ ವಿಲೇಗೊಳಿಸಲು ಆಧ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೋಂದಣಿ ಸಂಖ್ಯೆ ರದ್ದತಿಗಾಗಿ ಈ ಆದೇಶದ 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ: 21.10.2005 ರಂದು ಹೊರಡಿಸಲಾಗಿದೆ.

ಪಿ.ಆರ್. 1735 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್

**ವಿಷಯ :** ಸ್ಥಗೀತಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಚಿಮಕೋಡ ತಾ: ಬೀದರ್,** ಇದನ್ನು ಸಹಕಾರ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/ಸಿಆರ್-/2005-2006, ದಿನಾಂಕ: 10.10.2005.

2) ವಾರ್ತಾ ಪತ್ರಿಕೆಯಲ್ಲಿ ಪ್ರಕಟಣೆ ದಿನಾಂಕ: 27.8.2005 ಹಾಗೂ 29.08.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರು ನೋಂದಣಿ ಸಂಖ್ಯೆ: ಎಆರ್1/ಬಿಡಿಆರ್/ಎಂಪಿಸಿಎಸ್/7334/1979-80, ದಿನಾಂಕ: 19.02.1980 ರಲ್ಲಿ ನೋಂದಣಿ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಚಿಮಕೋಡ ತಾ: ಬೀದರ್,** ಈ ಸಂಘವು ಸುಮಾರು ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆ ಗೊಳಿಸಲು ಉಲ್ಲೇಖ (1)ರ ಮುಖೇನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಉಲ್ಲೇಖ (2) ರನ್ವಯ ಸಂಘದ ಸಮಾಪನೆ : ರದ್ದತಿ ಬಗ್ಗೆ ದಿನ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಲಾಗಿ ಯಾರಿಂದಲೂ ಯಾವುದೇ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೆಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೇ ರೀತಿಯ ಪ್ರಯೋಜನ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ್ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್-/2005-06/2827, ದಿನಾಂಕ: 21ನೇ/25ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/200, ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ.ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್ ಜಿಲ್ಲೆ, ಬೀದರ್ ಆದ ನಾನು ಸ್ಥಗೀತಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿ, ಚಿಮಕೋಡ ತಾ: ಬೀದರ್,** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ **ನಿರೀಕ್ಷಕರು, ಬೀದರ್ ತಾಲ್ಲೂಕು** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ - ಜವಾಬ್ದಾರಿ ವಿಲೇಗೊಳಿಸಲು ಆಧ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೋಂದಣಿ ಸಂಖ್ಯೆ ರದ್ದತಿಗಾಗಿ ಈ ಆದೇಶದ 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ: 21.10.2005 ರಂದು ಹೊರಡಿಸಲಾಗಿದೆ.

ಪಿ.ಆರ್. 1736 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯ :** ಸ್ಥಗೀತಗೊಂಡ **ಖಾಜಾ ಗರೀಬನ್ ನವಾಜ ಗೃಹ ನಿರ್ಮಾಣ ಸಹಕಾರ ಸಂಘ ನಿ, ಸಸ್ತಾಪೂರ ತಾ: ಬಸವಕಲ್ಯಾಣ,** ಇದನ್ನು ಸಹಕಾರ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇವರ ಪತ್ರ ಸಂಖ್ಯೆ: ಸನಿಬಿ1/ವಿ6/ಸಮಾಪನೆ/ಸಿಆರ್-/2005-2006, ದಿನಾಂಕ: 29.09.2005.

2) ವಾರ್ತಾ ಪತ್ರಿಕೆಯಲ್ಲಿ ಪ್ರಕಟಣೆ ದಿನಾಂಕ: 27.8.2005 ಹಾಗೂ 29.08.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರು ನೋಂದಣಿ ಸಂಖ್ಯೆ: ಸನಿಬಿ1/ವಿ6/ಹೆಚ್.ಬಿ.ಎಸ್./23363/1997-98, ದಿನಾಂಕ: 04.06.1997 ರಲ್ಲಿ ನೋಂದಣಿ **ಖಾಜಾ ಗರೀಬನ್ ನವಾಜ ಗೃಹ ನಿರ್ಮಾಣ ಸಹಕಾರ ಸಂಘ ನಿ, ಸಸ್ತಾಪೂರ ತಾ: ಬಸವಕಲ್ಯಾಣ,** ಈ ಸಂಘವು ಸುಮಾರು ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆ ಗೊಳಿಸಲು ಉಲ್ಲೇಖ (1)ರ ಮುಖೇನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಉಲ್ಲೇಖ (2) ರನ್ವಯ ಸಂಘದ ಸಮಾಪನೆ : ರದ್ದತಿ ಬಗ್ಗೆ ದಿನ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಲಾಗಿ ಯಾರಿಂದಲೂ ಯಾವುದೇ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೆಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೇ ರೀತಿಯ ಪ್ರಯೋಜನ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ್ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಉನಿಬಿ/ವಿ2/ಸಮಾಪನೆ/ಸಿಆರ್-/2005-06/2833, ದಿನಾಂಕ: 21ನೇ/25ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/200, ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ.ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್ ಜಿಲ್ಲೆ, ಬೀದರ್ ಆದ ನಾನು ಸ್ಥಗೀತಗೊಂಡ **ಖಾಜಾ ಗರೀಬನ್ ನವಾಜ ಗೃಹ ನಿರ್ಮಾಣ ಸಹಕಾರ ಸಂಘ ನಿ, ಸಸ್ತಾಪೂರ ತಾ: ಬಸವಕಲ್ಯಾಣ,** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಹುಮನಾಬಾದ್** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ - ಜವಾಬ್ದಾರಿ ವಿಲೇಗೊಳಿಸಲು ಆಧ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೋಂದಣಿ ಸಂಖ್ಯೆ ರದ್ದತಿಗಾಗಿ ಈ ಆದೇಶದ 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ: 21.10.2005 ರಂದು ಹೊರಡಿಸಲಾಗಿದೆ.

ಪಿ.ಆರ್. 1737 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್.

3. **ಮದ್ರಾಸ್ ಬ್ಯಾಂಕ್ ರಸ್ತೆ:** ಈ ರಸ್ತೆಯು ಲೆವೆಲ್ಲಿ ರಸ್ತೆಯಿಂದ ಪ್ರಾರಂಭಗೊಂಡು ಸೆಂಟ್ ಮಾರ್ಕ್ಸ್ ರಸ್ತೆಯ ಎಸ್.ಬಿ.ಐ ಜಂಕ್ಷನ್ ನಲ್ಲಿ ಕೊನೆಗೊಳ್ಳುತ್ತದೆ. ಈ ರಸ್ತೆಯಲ್ಲಿ ದ್ವಿಮುಖ ಸಂಚಾರವಿದ್ದು ಈ ಸಂಚಾರದಲ್ಲಿ ಲೆವೆಲ್ಲಿ ರಸ್ತೆ-ಮದ್ರಾಸ್ ಬ್ಯಾಂಕ್ ರಸ್ತೆ ಜಂಕ್ಷನ್ ನಿಂದ ಎಸ್.ಬಿ.ಐ ಜಂಕ್ಷನ್ ವರೆಗಿನ ಪಶ್ಚಿಮದಿಂದ ಪೂರ್ವಕ್ಕೆ ಚಲಿಸುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಎಸ್.ಬಿ.ಐ ಜಂಕ್ಷನ್ ನಿಂದ ಲೆವೆಲ್ಲಿ ರಸ್ತೆ ಕಡೆಗೆ ಮದ್ರಾಸ್ ಬ್ಯಾಂಕ್ ರಸ್ತೆಯಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಿದೆ.
4. **ಲೆವೆಲ್ಲಿ ರಸ್ತೆ:**ಲೆವೆಲ್ಲಿ ರಸ್ತೆಯಲ್ಲಿ ಕೆಥೆಡ್ರಿಲ್ ಚರ್ಚ್ ವೃತ್ತದಿಂದ ಮದ್ರಾಸ್ ಬ್ಯಾಂಕ್ ರಸ್ತೆವರೆಗೆ ಹಾಲಿ ಇರುವ ವಾಹನ ನಿಲುಗಡೆಯನ್ನು ನಿಷೇಧಿಸಿದೆ. ಈ ವಾಹನ ನಿಲುಗಡೆಯನ್ನು ಲೆವೆಲ್ಲಿ ರಸ್ತೆಯಿಂದ ಎಸ್.ಬಿ.ಐ ಜಂಕ್ಷನ್ ಕಡೆಗೆ ಹೋಗುವ ಮದ್ರಾಸ್ ಬ್ಯಾಂಕ್ ರಸ್ತೆಯಲ್ಲಿ ಬಲಗಡೆಗೆ ಸ್ಥಳಾಂತರಿಸಿ ಇಲ್ಲಿ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 28-12 -2005 ರಿಂದ ಪ್ರಾಯೋಗಿಕವಾಗಿ 1 ತಿಂಗಳ ಕಾಲ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:15 -12 -2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಡಾ: ಅಜಯಕುಮಾರ ಸಿಂಹ**
ಪೋಲೀಸ್ ಕಮೀಷನರ್, ಬೆಂಗಳೂರು ನಗರ

ಪಿ.ಆರ್. 26

## ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು (ಇ.ಐ.ಬಿ.) ಬಿಜಾಪೂರ ಜಿಲ್ಲೆ, ಬಿಜಾಪೂರ ಇವರ ನ್ಯಾಯಾಲಯ

### ಪ್ರಥಮ ಮಾಹಿತಿ ಸಂ: 11/2005-06, ದಿ:4ನೇ ಅಕ್ಟೋಬರ್ 2005

**ಫಿರ್ಯಾದುದಾರರು** : ಶ್ರೀ ಪಿ.ಎಸ್. ಪೀಡಕರ,
ಅಬಕಾರಿ ಉಪ ನಿರೀಕ್ಷಕರು-2
ಜಾರಿ ಮತ್ತು ತನಿಖೆ ಬಿಜಾಪೂರ ತಾಲ್ಲೂಕು.

**ಆರೋಪಿಗಳು** :
1. ಪರಶುರಾಮ ಭೀಮು ರಾಠೋಡ,
ಸಾ॥ಮಕಣಾಪೂರ ತಾಂಡಾ ನ:2.
ವಯಸ್ಸು:35 ಜಾತಿ:ಲಂಬಾಣಿ.
2. ಶ್ರೀ ಮಹಾಲಿಂಗಪ್ಪ ತಂದೆ ಹುಲಗಪ್ಪ ಬಂಡಿವಡ್ಡರ.
ಸಾ॥ಮಹಾಲಿಂಗಪೂರ, ತಾ॥ಮುಧೋಳ.
ಜಿ॥ಬಾಗಲಕೋಟ. (ವಾಹನ ಮಾಲೀಕರು)

**ಪ್ರಸ್ತಾವನೆ:**

ದಿ:4.10.2005 ರಂದು ಸಂಜೆ 9.30 ಗಂಟೆಗೆ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ತಾಲ್ಲೂಕು ಇವರು ತಮ್ಮ ಸಿಬ್ಬಂದಿಯೊಂದಿಗೆ ಬಿಜಾಪೂರ ತಾಲ್ಲೂಕಿನ ಶಿರನಾಳ ಗ್ರಾಮದಿಂದ ಮಕಣಾಪೂರ ತಾಂಡಾ ನಂ:2ಕ್ಕೆ ಹೋಗುವ ರಸ್ತೆಯ ಮಧ್ಯದಲ್ಲಿ ರಸ್ತೆ ಕಾವಲು ಮಾಡುತ್ತಿರುವಾಗ, ಶರನಾಳ ಗ್ರಾಮದಿಂದ ಮಕಣಾಪೂರ ತಾಂಡಾಕ್ಕೆ ಹೋಗುವ ರಸ್ತೆಯ ಮಾರ್ಗದಲ್ಲಿ ಒಂದು ದ್ವಿಚಕ್ರ ವಾಹನ ಬರುವುದು ಕಾಣಿಸಿತು. ದ್ವಿಚಕ್ರ ವಾಹನ ಅಬಕಾರಿ ಸಿಬ್ಬಂದಿ ಹತ್ತಿರ ಬಂದಾಗ ಅದನ್ನು ತಡೆದು ನೋಡಲಾಗಿ ಅದು ಒಂದು ಕೆಂಪು ಬಣ್ಣದ ಎಂ-80 ವಾಹನ ಇರುವುದು ತಿಳಿದುಕೊಂಡು ಎಂ-80 ದ್ವಿಚಕ್ರ ವಾಹನದ ಹಿಂದಗಡೆ ಇರುವ ಹತ್ತು (10) ಲೀಟರ್ ಸಾಮರ್ಥ್ಯದ ಪ್ಲಾಸ್ಟಿಕ್ ಕ್ಯಾನನ್ನು ಅದನ್ನು ನೋಲಿನ ಹಗ್ಗದಿಂದ ಕಟ್ಟಲಾಗಿತ್ತು. ಸದರಿ ಹಗ್ಗವನ್ನು ಬಿಚ್ಚಿ ಕ್ಯಾನಿನ ಮುಚ್ಚಳಿಕೆಯನ್ನು ತೆಗೆದು ನೋಡಲಾಗಿ ಅದರಲ್ಲಿ ಘಾಟವಾಸನೆಯ ಕಳ್ಳಭಟ್ಟಿ ಸಾರಾಯಿ ಇರುವುದು ಕಂಡು ಬಂದಿತ್ತು. ತದನಂತರ ಸದರಿ ಎಂ-80 ದ್ವಿಚಕ್ರ ವಾಹನ ಪರಿಶೀಲಿಸಲಾಗಿ ಅದರ ನೋಂದಣಿ ಸಂಖ್ಯೆ: ಕೆಎ-29-ಇ-2251, ಚೆಸ್ಸಿ ನಂಬರ್:C.16.CG.078389 ಮತ್ತು ಇಂಜಿನ್ ನಂಬರ್ E.16.CG 075983 ಇರುವುದು ಅಂತಾ ತಿಳಿಸಿ ಕ್ಯಾನಿನಲ್ಲಿದ್ದ 10 ಲೀಟರ್ ಕಳ್ಳಭಟ್ಟಿ ಸಾರಾಯಿ ಇಂದ 180 ಎಂಎಲ್‌ದಷ್ಟು ಒಂದು ಬಾಟಲಿಯಲ್ಲಿ ರಸಾಯನ ಪರೀಕ್ಷೆಗಾಗಿ ತೆಗೆದುಕೊಂಡು ಶೀಲ್ ಮಾಡಿ ಪಂಚರ ಹಾಗೂ ಅಬಕಾರಿ ಉಪ ನಿರೀಕ್ಷಕರು ಇವರ ಸಹಿ ಚೀಟಿಗಳನ್ನು ಅಂಟಿಸಿ ನಂತರ ಮುದ್ದೇಮಾಲನ್ನು ಹಾಗೂ ದ್ವಿಚಕ್ರ ವಾಹನವನ್ನು ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು ತಮ್ಮ ತಬಾಕ್ಕೆ ತೆಗೆದುಕೊಂಡು ಘಟನೆ ನಡೆದ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆ ಕ್ರಮ ಜರುಗಿಸಿರುತ್ತಾರೆ. ನಂತರ ಗುನ್ನೆ ನಂ.11/2005-06 ನ್ನು ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ಪೀರ್ಯಾಧಿಯೊಂದಿಗೆ ಆರೋಪಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ಇವರು ಸಲ್ಲಿಸಿದ ವರದಿಗಳನ್ನು ಪರಿಶೀಲನೆ ಮಾಡಲಾಗಿ ರಸಾಯನಿಕ ತಜ್ಞರ ವರದಿ ಸಂ: CCL. 5881/2005 ದಿನಾಂಕ: 20.10.2005ರಲ್ಲಿ ಜಪ್ತಿ ಮಾಡಿದ ಕಳ್ಳಭಟ್ಟಿ ಸಾರಾಯಿಯಲ್ಲಿ ಮದ್ಯಸಾರದ ಅಂಶ ಇದ್ದು ಇದು **"ಮಾನವನ ಸೇವನೆಗೆ ಯೋಗ್ಯ ಇರುವುದಿಲ್ಲಾ"** ಅಂತಾ ನಮೂದಿಸಿರುತ್ತಾರೆ. ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪೂರ ಇವರ ವರದಿಯಲ್ಲಿ ಸದರಿ ಎಂ-80 ದ್ವಿಚಕ್ರ ವಾಹನ ನೋಂದಣಿ ಸಂಖ್ಯೆ:ಕೆಎ-29-ಇ2251ರ ವಾಹನದ ಮಾಲೀಕರ ಹೆಸರು ಶ್ರೀ ಮಹಾಲಿಂಗಪ್ಪಾ ತಂದೆ ಹುಲಗಪ್ಪಾ ಬಂಡಿವಡ್ಡರ ಸಾ॥ಮಹಾಲಿಂಗಪೂರ, ತಾ॥ಮುಧೋಳ, ಜಿ॥ಬಾಗಲಕೋಟ ಅಂತಾ ನಮೂದಿಸಿರುತ್ತಾರೆ. ಸದರಿ ಎಂ-80 ದ್ವಿಚಕ್ರ ವಾಹನ ಸಂ:ಕೆಎ-29-ಇ-2251ನ್ನು ಅಕ್ರಮವಾಗಿ ಕಳ್ಳಭಟ್ಟಿ ಸಾಗಾಣಿಕೆ ಮಾಡುವುದರಲ್ಲಿ ತೊಡಗಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಪ್ರಕಾರ ಜಪ್ತಿ ಮಾಡಿದ ವಾಹನ ಮತ್ತು ಮುದ್ದೇಮಾಲನ್ನು ನಿಯಮಗಳ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುತ್ತದೆ.

ಆದ್ದರಿಂದ ಈ ಪ್ರಕ್ರಿಯೆ ಮಾಡುವ ಮುನ್ನ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳುವ ನೋಟಿಸ್ ನೀಡಿ ನಂತರ ಪ್ರಕರಣದಲ್ಲಿ ಜಪ್ತಿ ಪಡಿಸಿದ ಮುದ್ದೇಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಕಾರಣ ಕೇಳುವ ನೋಟೀಸನ್ನು ಹೊರಡಿಸಲಾಗಿದೆ.

### ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ಪ್ರಕಾರ ಕಾರಣ ಕೇಳುವ ನೋಟೀಸು.

### ಸಂ:ಇಎಕ್ಸ್‌ಇ:ಸಿಆರ್‌ಎಂ:ಡಿಟಿಸಿಆರ್:63/2005-06, ದಿನಾಂಕ: 24ನೇ ಡಿಸೆಂಬರ್ 2005

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಪರಿಶೀಲಿಸಲಾಗಿ ನಾನು ಕೆ.ಆರ್. ಗೌಡ್ರ ಅಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ ಆದ ನಾನು ಎಂ-80 ದ್ವಿಚಕ್ರ ವಾಹನ ಸಂಖ್ಯೆ ಕೆಎ-29-ಇ-2251ದ ಮಾಲೀಕರಾದ ನೀವು ಅಂದರೆ ಮಹಾಲಿಂಗಪ್ಪ ತಂದೆ ಹುಲಗಪ್ಪ ಬಂಡಿವಡ್ಡರ ಸಾ॥ಮಹಾಲಿಂಗಪೂರ, ತಾ॥ಮುಧೋಳ, ಜಿ॥ಬಾಗಲಕೋಟ, ಆದ ನಿಮಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ದಿನಾಂಕ:4.10.2005 ರಂದು ಸದರಿ ಎಂ-80 ದ್ವಿಚಕ್ರ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ

ಮಾಡುತ್ತಿರುವ ಅಪರಾಧ ವೆಸಗಿದ ಪ್ರಯುಕ್ತ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ತಾಲ್ಲೂಕು ಇವರು ಗುನ್ಹೆ ನಂ:11/2005-06 ರಲ್ಲಿ ಸದರಿ ದ್ವಿಚಕ್ರ ವಾಹನವನ್ನು ಮತ್ತು 10 ಲೀಟರ್ ಕಳ್ಳಭಟ್ಟಿ ಸಾರಾಯಿಯ ಜಪ್ತಿ ಮಾಡಿ ಪ್ರಕರಣವನ್ನು ದಾಖಲಿಸಿರುತ್ತಾರೆ. ಕಾರಣ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಪ್ರಕಾರ ನಿಮ್ಮ ವಾಹನವನ್ನು ಕರ್ನಾಟಕ ರಾಜ್ಯ ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬುದರ ಬಗ್ಗೆ ನಿಮ್ಮ ತಕರಾರು ಅಥವಾ ನಿರಪರಾಧಿಗಳೆಂದು ನಿರೂಪಿಸಲು ತಾವಾಗಲೀ ಅಥವಾ ತಾವು ನಿಯೋಜಿಸಿದ ನ್ಯಾಯವಾದಿಗಳಾಗಲೀ ಈ ಕಾರಣ ಕೇಳುವ ನೋಟಿಸ್ ತಲುಪಿದ ಏಳು (7) ದಿನಗಳ ಒಳಗಾಗಿ ಈ ಪ್ರಾಧಿಕಾರಕ್ಕೆ ಲಿಖಿತವಾದ ಹೇಳಿಕೆ ಮತ್ತು ದಾಖಲಾತಿಗಳನ್ನು ಹಾಜರುಪಡಿಸತಕ್ಕದ್ದು. ಮತ್ತು ತಮಗೆ ಈ ಪ್ರಕರಣದಲ್ಲಿ ವಿಚಾರಣೆ ಮಾಡುವ ಇರಾದೇ ಇದೆಯೇ? ಅಥವಾ ಇಲ್ಲಾ ಎಂಬುದರ ಬಗ್ಗೆ ಕೂಡಾ ನಿಗದಿತ ಅವಧಿಯೊಳಗೆ ಈ ಪ್ರಾಧಿಕಾರಕ್ಕೆ ಲಿಖಿತ ಮೂಲಕ ತಿಳಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿ ಒಳಗಾಗಿ ನಿಮ್ಮಿಂದ ಸೂಕ್ತ ವಿವರಣೆ, ಸೂಕ್ತ ಸಮಜಾಯಿಸಿ ಬರದೇ ಇದ್ದಲ್ಲಿ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಭಾವಿಸಿ ಈ ಪ್ರಕರಣದಲ್ಲಿ ಜಪ್ತಿ ಪಡಿಸಿದ ದ್ವಿಚಕ್ರ ವಾಹನ ಎಂ-80 ನೋಂದಣಿ ಸಂ:ಕೆಎ-29-ಇ-2251ನ್ನು ಮತ್ತು ಜಪ್ತಿಪಡಿಸಿದ ಮುದ್ದೇಮಾಲನ್ನು (ಶ್ಯಾಂಪಲ್ ಬಾಟಲಿಯನ್ನು ಹೊರತುಪಡಿಸಿ) ಏಕಪಕ್ಷೀಯವಾಗಿ ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲೆಗಳ ಆಧಾರದ ಮೇಲೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಮತ್ತು (ಸಿ) ಪ್ರಕಾರ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶವನ್ನು ನೀಡಲಾಗುವುದು ತಡವಾಗಿ ಬಂದ ಅರ್ಜಿಗಳಾಗಲೀ ಅಥವಾ ವಿವರಣೆಯಾಗಲೀ ಪರಿಗಣಿಸ ಲಾಗುವುದಿಲ್ಲವೆಂದು ತಿಳಿಯತಕ್ಕದ್ದು.

ಈ ಕಾರಣ ಕೇಳುವ ನೋಟೀಸನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ಪ್ರಕಾರ ದಿನಾಂಕ: 24.12.2005 ರಂದು ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ನನ್ನ ಸಹಿ ಮತ್ತು ಮೊಹರು ಹಾಕಿ ಹೊರಡಿಸಲಾಗಿದೆ.

**ಕೆ.ಆರ್. ಗೌಡ್ರ**

ಪಿ.ಆರ್. 14 ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು (ಇ.ಐ.ಬಿ) ಬಿಜಾಪೂರ ಜಿಲ್ಲೆ.

**ಆಯುಕ್ತರ ಕಛೇರಿ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ**

**ಅಧಿಸೂಚನೆ ಸಂಖ್ಯೆ:ಸಿಎಫ್ಎಸ್:ಪಿಡಿ:ಪಿಟಿಎಲ್:9/2002-03, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್ 2005**

**ವಿಷಯ:** ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶಕ್ಕೆ ವಿತರಿಸಲಾಗುವ ಸೀಮೆಎಣ್ಣೆ ದರ ವ್ಯಾಟ್ ಅಳವಡಿಸಿರುವಂತೆ ಪರಿಷ್ಕರಣೆ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಪತ್ರ ಸಿಎಫ್ಎಸ್:ಪಿಡಿ:III:6:2005-06 ದಿ: 6.4.2005.

2. ಅಪರ ನಿರ್ದೇಶಕರು (ಸಂ.ವಿ), ಆನಾಸ ಮತ್ತು ಗ್ರಾವ್ಯ ಇಲಾಖೆ ರವರ ಕಛೇರಿ ಅಧಿಸೂಚನೆ ಸಂ:ಎಡಿ: ಡಿಎಫ್‌ಜಿ:ಪಿಟಿಎಲ್:2:05-06 ದಿ: 8.4.2005.

ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ರಾಜ್ಯ ಸರ್ಕಾರವು ಸುಮೌಲ್ಯ (VAT) ತೆರಿಗೆ ಪದ್ಧತಿಯನ್ನು ದಿ: 1.4.2005 ರಿಂದ ಜಾರಿಗೆ ತರಲಾಗಿದ್ದು, ಅದರಂತೆ, ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ವಿತರಿಸಲಾಗುವ ಸೀಮೆಎಣ್ಣೆಯು ವ್ಯಾಟ್ ಅಡಿ ಶೇಕಡಾ 4% ರ ತೆರಿಗೆಯನ್ನು ವಿಧಿಸಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಪತ್ರದಲ್ಲಿ ರಾಜ್ಯಾದ್ಯಂತ ವ್ಯಾಟ್ ತೆರಿಗೆಯನ್ನು ಪಡಿತರ ಸೀಮೆಎಣ್ಣೆ ದರಪಟ್ಟಿಗೆ ಅಳವಡಿಸಿಕೊಳ್ಳುವ ಬಗ್ಗೆ ಉದಾಹರಣೆಯೊಂದನ್ನು ನೀಡಿ ಸೀಮೆಎಣ್ಣೆ ದರಪಟ್ಟಿಯನ್ನು ಪರಿಷ್ಕೃತಗೊಳಿಸಲು ತಿಳಿಸಲಾಗಿರುತ್ತದೆ.

ಉಲ್ಲೇಖ (2) ರನ್ವಯ ಅಪರ ನಿರ್ದೇಶಕರು (ಸಂ.ವಿ) ರವರು ಹೊರಡಿಸಿರುವ ವ್ಯಾಟ್ ಸೇರಿದ ಪರಿಷ್ಕೃತ ದರ ಅಧಿಸೂಚನೆಯಲ್ಲಿ 1.4.2005 ರಲ್ಲಿ ಚಾಲ್ತಿಯಲ್ಲಿರುವ ಸಾಗಾಣಿಕೆ ದರ ರೂ. 115.18 ಬದಲಾಗಿ ರೂ.191.56 ಗಳನ್ನು ಪಾವತಿಸಬೇಕಾದ ಸಾಗಾಣಿಕೆ ದರ ಎಂಬುದಾಗಿ ನಮೂದಿಸಿ ಸರ್ಕಾರಕ್ಕೆ ಪಾವತಿಸಬೇಕಾದ ವ್ಯತ್ಯಾಸದ ದರ 98.13 ಪೈಸೆಗೆ ಬದಲಾಗಿ 19.85 ಪೈಸೆ ಎಂಬ ದರದ ಮೇಲೆ ಪರಿಷ್ಕೃತ ಆದೇಶ ಹೊರಡಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿ ಅಪರ ನಿರ್ದೇಶಕರು (ಸಂ.ವಿ) ರವರು ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶಕ್ಕೆ ಉಲ್ಲೇಖ (2) ರನ್ವಯ ಹೊರಡಿಸಿದ ಅಧಿಸೂಚನೆಯನ್ನು ರದ್ದುಗೊಳಿಸಿದೆ.

ಈ ಹಿನ್ನೆಲೆಯಲ್ಲಿ ಪುನರ್ ಪರಿಷ್ಕೃತ ಆದೇಶವನ್ನು ಹೊರಡಿಸಬೇಕಾದ ಅಗತ್ಯವಿದ್ದು, ಬಿ.ಹೆಚ್. ಅನಿಲ್ ಕುಮಾರ್, ಭಾ.ಆ.ಸೇ., ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಆದ ನಾನು, ಸೀಮೆಎಣ್ಣೆ (ಉಪಯೋಗದ ಮೇಲಿನ ನಿರ್ಬಂಧ ಮತ್ತು ದರ ನಿಗದಿ) ಆದೇಶ 1993 ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶಕ್ಕೆ ದಿ: 1.4.2005 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸಾರ್ವಜನಿಕ ವಿತರಣಾ ಪದ್ಧತಿ ಸೀಮೆಎಣ್ಣೆಯ ಗರಿಷ್ಟ ಮಾರಾಟ ದರವನ್ನು ಪುನರ್ ಪರಿಷ್ಕರಿಸಿ ಸಕ್ಷಮ ದರಪಟ್ಟಿಯನ್ನು ಲಗತ್ತು ಅನುಬಂಧ (1) ರಲ್ಲಿನಂತೆ ಆದೇಶಿಸಿದೆ. ಅಂತೆಯೇ, ತೈಲ ಕಂಪನಿಗಳಿಗೆ ಪಾವತಿಸುವ ಸಾಗಾಣಿಕೆ ದರವು 1.10.2005 ರಿಂದ ಪರಿಷ್ಕೃತವಾಗಿರುವಂತೆ ಪೂರ್ವಾನ್ವಯವಾಗಿ 1.10.2005 ರಿಂದ ಜಾರಿಗೆ ಬರುವಂತೆ ಸಕ್ಷಮ ಪುನರ್ ಪರಿಷ್ಕೃತ ದರಪಟ್ಟಿಯನ್ನು ಅನುಬಂಧ (2) ರಂತೆ ಆದೇಶಿಸಿದೆ.

**ಬಿ.ಹೆಚ್. ಅನಿಲ್ ಕುಮಾರ್**

ಆಯುಕ್ತರು,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು.

**ಅನುಬಂಧ-1**

**ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶಕ್ಕೆ ಸೀಮೆಎಣ್ಣೆ ದರ ಪಟ್ಟಿ 1-4-2005 ರಿಂದ ಜಾರಿಗೆ ಬರುವಂತೆ**

| ಕ್ರ. ಸಂ. | ವಿವರಗಳು | ದರ |
|---|---|---|
| 1 | ಎಕ್ಸ್ ಟರ್ಮಿನಲ್ ದರ | 8228.41 |
| 2. | ವ್ಯಾಟ್ ತೆರಿಗೆ @ 4% | 329.14 |
| 3. | ಟರ್ಮಿನಲ್ ವಿತರಣಾ ದರ | 8557.55 |
| 4. | ಆಯಿಲ್ ಕಂಪನಿಗೆ ನೀಡಬೇಕಾದ ಸಾಗಾಣಿಕೆ ದರ | 115.18 |
| 5. | ಆಯಿಲ್ ಕಂಪನಿಗೆ ಪಾವತಿಸಬೇಕಾದ ಮೊತ್ತ | 8672.73 |
| 6. | ಸಗಟು ವಹಿವಾಟುದಾರರ ಕಮಿಷನ್ * | 204.36 |
| 7. | ನ್ಯಾಯಬೆಲೆ ಅಂಗಡಿಗೆ ಸೀಮೆಎಣ್ಣೆ ವಿತರಿಸುವ ಸಾಗಾಣಿಕೆ ದರ | 0 |
| 8. | ಸುಮೌಲ್ಯ ತೆರಿಗೆ @ 4% | 12.78 |
| 9. | ಸಗಟು ಬೆಲೆ | 8889.87 |

| ಕ್ರ. ಸಂ. | ವಿವರಗಳು | ದರ |
|---|---|---|
| 10. | ಸರ್ಕಾರಕ್ಕೆ ಪಾವತಿಸಬೇಕಾದ ವ್ಯತ್ಯಾಸದ ದರ | 98.13 |
| 11. | ಸಗಟು ವಿತರಣಾ ಬೆಲೆ ಪ್ರತಿ ಕೆ.ಎಲ್.ಗೆ | 8988.00 |
| 12. | ಚಿಲ್ಲರೆ ಮಾರಾಟಗಾರರ ಕಮಿಷನ್ ಪ್ರತಿ ಕೆ.ಎಲ್.ಗೆ | 300.00 |
| 13. | ಸುಮೌಲ್ಯ ತೆರಿಗೆ | 12.00 |
| 14. | ಚಿಲ್ಲರೆ ಮಾರಾಟ ದರ ಪ್ರತಿ ಕೆ.ಎಲ್.ಗೆ | 9300.00 |
| 15. | ಚಿಲ್ಲರೆ ಮಾರಾಟ ದರ ಪ್ರತಿ ಲೀಟರ್‌ಗೆ | 9.30 |

*ಭಾರತ ಸರ್ಕಾರದ ಪತ್ರ ಸಂಖ್ಯೆ:ಪಿ-20028/2/2000 ಪಿಪಿ 4-6-2002ರಂತೆ ಈ ಕಛೇರಿ ಪತ್ರ ಸಿಎಫ್‌ಎಸ್:ಪಿಡಿ:ಪಿಟಿಎಲ್:9/2002-03, ದಿ:25.7.2002ರಲ್ಲಿ ತಿಳಿಸಿರುವಂತೆ ಫಾರಂ XIII ವಹಿವಾಟುದಾರರಿಗೆ ನೀಡುವ ಎಲ್ಲಾ ಘಟಕ ವೆಚ್ಚಗಳು ಇದರಲ್ಲಿ ಒಳಗೊಂಡಿರುತ್ತದೆ.

**ಬಿ.ಹೆಚ್. ಅನಿಲ್ ಕುಮಾರ್**
ಆಯುಕ್ತರು,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು.

**ಅನುಬಂಧ-2**

**ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶಕ್ಕೆ ಸೀಮೆಎಣ್ಣೆ ದರ ಪಟ್ಟಿ 1-10-2005 ರಿಂದ ಜಾರಿಗೆ ಬರುವಂತೆ**

| ಕ್ರ. ಸಂ. | ವಿವರಗಳು | ದರ |
|---|---|---|
| 1 | ಎಕ್ಸ್ ಟರ್ಮಿನಲ್ ದರ | 8228.41 |
| 2. | ವ್ಯಾಟ್ ತೆರಿಗೆ @ 4% | 329.14 |
| 3. | ಟರ್ಮಿನಲ್ ವಿತರಣಾ ದರ | 8557.55 |
| 4. | ಆಯಿಲ್ ಕಂಪನಿಗೆ ನೀಡಬೇಕಾದ ಸಾಗಾಣಿಕೆ ದರ | 158.68 |
| 5. | ಆಯಿಲ್ ಕಂಪನಿಗೆ ಪಾವತಿಸಬೇಕಾದ ಮೊತ್ತ | 8716.23 |
| 6. | ಸಗಟು ವಹಿವಾಟುದಾರರ ಕಮಿಷನ್ * | 204.36 |
| 7. | ನ್ಯಾಯಬೆಲೆ ಅಂಗಡಿಗೆ ಸೀಮೆಎಣ್ಣೆ ವಿತರಿಸುವ ಸಾಗಾಣಿಕೆ ದರ | 0 |
| 8. | ಸುಮೌಲ್ಯ ತೆರಿಗೆ @ 4% | 14.52 |
| 9. | ಸಗಟು ಬೆಲೆ | 8935.11 |
| 10. | ಸರ್ಕಾರಕ್ಕೆ ಪಾವತಿಸಬೇಕಾದ ವ್ಯತ್ಯಾಸದ ದರ | 52.89 |
| 11. | ಸಗಟು ವಿತರಣಾ ಬೆಲೆ ಪ್ರತಿ ಕೆ.ಎಲ್.ಗೆ | 8988.00 |
| 12. | ಚಿಲ್ಲರೆ ಮಾರಾಟಗಾರರ ಕಮಿಷನ್ ಪ್ರತಿ ಕೆ.ಎಲ್.ಗೆ | 300.00 |
| 13. | ಸುಮೌಲ್ಯ ತೆರಿಗೆ | 12.00 |
| 14. | ಚಿಲ್ಲರೆ ಮಾರಾಟ ದರ ಪ್ರತಿ ಕೆ.ಎಲ್.ಗೆ | 9300.00 |
| 15. | ಚಿಲ್ಲರೆ ಮಾರಾಟ ದರ ಪ್ರತಿ ಲೀಟರ್‌ಗೆ | 9.30 |

*ಭಾರತ ಸರ್ಕಾರದ ಪತ್ರ ಸಂಖ್ಯೆ:ಪಿ-20028/2/2000 ಪಿಪಿ 4-6-2002ರಂತೆ ಈ ಕಛೇರಿ ಪತ್ರ ಸಿಎಫ್‌ಎಸ್:ಪಿಡಿ:ಪಿಟಿಎಲ್:9/2002-03, ದಿ:25.7.2002ರಲ್ಲಿ ತಿಳಿಸಿರುವಂತೆ ಫಾರಂ XIII ವಹಿವಾಟುದಾರರಿಗೆ ನೀಡುವ ಎಲ್ಲಾ ಘಟಕ ವೆಚ್ಚಗಳು ಇದರಲ್ಲಿ ಒಳಗೊಂಡಿರುತ್ತದೆ.

**ಬಿ.ಹೆಚ್. ಅನಿಲ್ ಕುಮಾರ್**
ಪಿ.ಆರ್. 17 ಆಯುಕ್ತರು,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು.

**PUBLIC NOTICE**
**SANVIK VISIONS PRIVATE LIMITED**
**No. 212, Cottonpet Main Road, Bangalore - 560 053**

Notice is hereby given for general information that the members of SANVIK VISIONS PRIVATE LIMITED at an Extra Ordinary General Meeting of the Company held on 16.01.06 at its Registered Office, have passed the following special resolution to wind up the company voluntarily:

1. RESOLVED that pursuant to sections 484(1)(b) of the Companies Act, 1956, the Company be wound up voluntarily
2. RESOLVED that Mr. Vikash Kejriwal, be and is hereby appointed as liquidator of the company pursuant to the provisions of Section 490- of the Companies Act, 1956 at a remuneration of Rs. 10,000 plus out of pocket expenses at actuals.

Dated:16.01.06 Liquidator

**FORM NO. 151**
**(See rule 315)**
**Member's (or Creditor's) Voluntary Winding up**
**Notice of appointment of liquidator pursuant to section 516**

Name of company: SANVIK VISIONS PRIVATE LIMITED
Nature of business: Dealers in all kinds of Paper, Paperboard, Stationery and Tea
Address of Registered Office: No. 212, Cottonpet Main Road, Bangalore - 560 053
Name(s) and address (es) of Liquidator(s): Mr. Vikash Kejriwal, 1580A, 25th Cross, 30th Main, Banashankari II Stage, Bangalore - 560 070
Date of appointment: 16.01.06
By whom appointed: Shareholders at their meeting held on 16th January 2006
Dated:16.01.06
P.D. 8 Liquidator

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ

**ಪ್ರಕರಣ ಸಂಖ್ಯೆ: ಡಬ್ಲ್ಯೂ.ಸಿಎ:ಎಫ್.ಸಿ-36/2005**

**ಅರ್ಜಿದಾರರು:**

1) ಶ್ರೀಮತಿ ಶಬಾನಾ ಕೋಂ ಲೇಟ್ ಷಂಶೂದ್ದೀನ್ ಅಲಿಯಾಸ್ ಗುಂಡು,
2) ಅಸೇನ್ ಬಿನ್ ಷಂಶೂದ್ದೀನ್,
3) ಅರ್ಷದ್ ಬಿನ್ ಷಂಶೂದ್ದೀನ್,
4) ಅಲ್ತಾಫ್ ಬಿನ್ ಷಂಶೂದ್ದೀನ್,
5) ಎಸ್.ಕೆ. ಷಂಶೂದ್ದೀನ್ ಬಿನ್ ಮೊಹಮ್ಮದ್ ಇಬ್ರಾಹಿಂ
6) ಶ್ರೀಮತಿ ಥಹರಾ ಕೋಂ ಷಂಶೂದ್ದೀನ್, ಅಯ್ಯಕನ್ ಸ್ಟ್ರೀಟ್, ಪಲಮನೇರ್ ಟೌನ್, ಚಿತ್ತೂರು ಜಿಲ್ಲೆ, ಆಂಧ್ರ ಪ್ರದೇಶ.

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀ ವಿ. ಗುಣಶೇಖರ್ ಬಿನ್ ವೆಂಕಟಾಚಲಂ, ನಂ.6-223, ಲಕ್ಷ್ಮಿನಗರ, ನ್ಯಾಮಕಲ್, ತಮಿಳುನಾಡು.
2) ಮೆ: ಸುಗುಣ ಹ್ಯಾಚರೀಸ್ ಪ್ರೈ. ಲಿ., ಅಗ್ರಿಕಲ್ಚರಲ್ ಕಛೇರಿ ಹಾಗೂ ಎಲೆಕ್ಟ್ರೀಕಲ್ ಕಛೇರಿ ಹತ್ತಿರ, ಪಲಮನೇರು ಟೌನ್, ಚಿತ್ತೂರು ಜಿಲ್ಲೆ, ಆಂಧ್ರ ಪ್ರದೇಶ.
3) ಮೆ: ನ್ಯಾಷನಲ್ ಇನ್‌ಷೂರೆನ್ಸ್ ಕಂಪನಿ ಲಿಮಿಟೆಡ್, ನಂ.63, ರಾಸಿ ಪ್ಲಾಜ್, ತಮಿಳುನಾಡು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಶಬಾನಾ ಕೋಂ ಲೇಟ್ ಷಂಶೂದ್ದೀನ್ ಅಲಿಯಾಸ್ ಗುಂಡು ಅವರು ತಮ್ಮ ಪತಿ ಷಂಶೂದ್ದೀನ್ ಅಲಿಯಾಸ್ ಗುಂಡು ಅವರು 2ನೇ ಪ್ರತಿವಾದಿಯಾದ ಮೆ: ಸುಗುಣ ಹ್ಯಾಚರೀಸ್ ಪ್ರೈ. ಲಿ., ರವರ ಟೆಂಪೋದಲ್ಲಿ ಕೂಲಿ ಆಗಿದ್ದು, ಕರ್ತವ್ಯ ನಿರತರಾಗಿದ್ದಾಗ ದಿನಾಂಕ: 13.02.2005 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 05.11.2005 ರಂದು ನೀಡಲಾಗಿದೆ.

**ಕೃಷ್ಣಪ್ಪ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1752

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ

**ಪ್ರಕರಣ ಸಂಖ್ಯೆ: ಡಬ್ಲ್ಯೂ.ಸಿಎ:ಎಫ್.ಸಿ-37/2005**

**ಅರ್ಜಿದಾರರು:**

1) ತುಳಸಮ್ಮ ಸಿ.ವಿ., ಕೋಂ ಲೇಟ್ ಎಂ. ವೆಂಕಟಾಚಲಪತಿ ಅಲಿಯಾಸ್ ಚಲಪತಿ,
2) ಗಂಡು ಮಗು ಇನ್ನೂ ಹೆಸರು ಇಟ್ಟಿರುವುದಿಲ್ಲ (ದಿನಾಂಕ: 13.10.2005 ರಂದು ಜನಿಸಿರುವುದು)
ಮೊದಲು ವಾಸಿಸುತ್ತಿದ್ದು:
ಮಾಗೇರಿ ವಿಲೇಜ್, ಸುಳಿಕುಂಟೆ ಅಂಚೆ ಬಂಗಾರಪೇಟೆ ತಾ:
ಪ್ರಸ್ತುತ ವಾಸ ಸ್ಥಳ: ಚೌಡದೇನಹಳ್ಳಿ ವಿಲೇಜ್,
ಮಾದೇರಹಳ್ಳಿ ಅಂಚೆ, ಕೋಲಾರ ತಾ:

**ವಿರುದ್ಧ**

**ಪ್ರತಿವಾದಿಗಳು:**

1) ಡಿ.ಆರ್. ಶ್ರೀನಾಥ್ ಬಿನ್ ಪಿ.ಎಂ. ರಾಮಮೂರ್ತಿ, ಶ್ರೀ ಸರಸ್ವತಿ ಟ್ರೇಡಿಂಗ್ ಕಂ., ನಂ.43ಎ, ಎಪಿಎಂಸಿ ಯಾರ್ಡ್, ಬಂಗಾರಪೇಟೆ, ಕೋಲಾರ ಜಿಲ್ಲೆ.
2) ಯುನೈಟೆಡ್ ಇಂಡಿಯಾ ಇನ್‌ಷೂರೆನ್ಸ್ ಕಂಪನಿ ಲಿಮಿಟೆಡ್, ಅಂಚೆ ಪೆಟ್ಟಿಗೆ ಸಂಖ್ಯೆ: 24, 1ನೇ ಮಹಡಿ, ದೊಡ್ಡಪೇಟೆ, ಕೋಲಾರ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ತುಳಸಮ್ಮ ಸಿ.ವಿ. ಕೋಂ ಲೇಟ್ ಎಂ. ವೆಂಕಟಾಚಲಪತಿ ಅಲಿಯಾಸ್ ಚಲಪತಿ ಅವರು ತಮ್ಮ ಪತಿ ಎಂ. ವೆಂಕಟಾಚಲಪತಿ ಅಲಿಯಾಸ್ ಚಲಪತಿ ಅವರು 1ನೇ ಪ್ರತಿವಾದಿಯಾದ ಡಿ.ಆರ್. ಶ್ರೀನಾಥ್ ಗೂಡ್ಸ್ ಟೆಂಪೋದಲ್ಲಿ ಚಾಲಕ ಆಗಿದ್ದು, ಕರ್ತವ್ಯ ನಿರತರಾಗಿದ್ದಾಗ ದಿನಾಂಕ: 7.10.2005 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 05.11.2005 ರಂದು ನೀಡಲಾಗಿದೆ.

**ಕೃಷ್ಣಪ್ಪ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1753

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**
**ಪ್ರಕರಣ ಸಂಖ್ಯೆ: ಡಬ್ಲ್ಯೂ.ಸಿಎ:ಎಫ್.ಸಿ-38/2005**

**ಅರ್ಜಿದಾರರು:**

1) ಶ್ರೀ ನಂಜುಂಡಪ್ಪ ಬಿನ್ ಲೇಟ್ ನಂಜಯ್ಯ, 50 ವರ್ಷ,
2) ಶ್ರೀಮತಿ ಪಾರ್ವತಮ್ಮ ಕೋಂ ಶ್ರೀ ನಂಜುಂಡಪ್ಪ, 46 ವರ್ಷ, ಮೇಲ್ಯ ವಿಲೇಜ್, ಗೌರಿಬಿದನೂರು ತಾಲ್ಲೂಕು, ಕೋಲಾರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀ ರಾಮಚಂದ್ರ ಮೂರ್ತಿ ಸಿ., ಬಿನ್ ಲೇಟ್ ಚಿಕ್ಕಮುನಿಯಪ್ಪ, ನಂ.80, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ.
2) ದಿ ಓರಿಯಂಟಲ್ ಇನ್‌ಷೂರೆನ್ಸ್ ಕಂಪನಿ, ನಂ.10, ನಂ.213/217, 2ನೇ ಮಹಡಿ, 3ನೇ ಮೇನ್, 4ನೇ ಕ್ರಾಸ್, ಚಾಮರಾಜಪೇಟೆ, ಬೆಂಗಳೂರು 560018.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ನಂಜುಂಡಪ್ಪ ಬಿನ್ ಲೇಟ್ ನಂಜಯ್ಯ, ಅವರು ತಮ್ಮ ಮಗ ಮಂಜುನಾಥ ಅವರು 1ನೇ ಪ್ರತಿವಾದಿಯಾದ ಶ್ರೀ ರಾಮಚಂದ್ರ ಮೂರ್ತಿ ಸಿ., ರವರ ಗೂಡ್ಸ್ ಟೆಂಪೋದಲ್ಲಿ ಚಾಲಕ ಆಗಿದ್ದು, ಕರ್ತವ್ಯ ನಿರತರಾಗಿದ್ದಾಗ ದಿನಾಂಕ: 11.02.2005 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 05.11.2005 ರಂದು ನೀಡಲಾಗಿದೆ.

ಕೃಷ್ಣಪ್ಪ
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 1754

**KARNATAKA ADMINISTRATIVE TRIBUNAL**
**BDA Complex, Indiranagar, Bangalore-560 038**
**No. KAT/EST(1)/KRI-Act.2000/27/2001, Dated: 10th October 2005**
**NOTIFICATION UNDER SECTION 5 OF THE RIGHT TO INFORMATION (CENTRAL) ACT, 2005 (NO.22 OF 2005)**

It is hereby notified to the general public that for furnishing information under the (Central Act No.22 of 2005) Right to Information Act, 2005 (hereinafter referred to as "the said Act") the Deputy Registrar (Admn.) Karnataka Administrative Tribunal, Bangalore is designated as the State Assistant Public Information Officer (Admn.) and the Deputy Registrar (Judicial), Karnataka Administrative Tribunal, Bangalore is designated as the State Assistant Public Information Officer (Judicial) in respect of Karnataka Administrative Tribunal, BDA Complex, Indiranagar, Bangalore-38, to whom applications under Section 5(1) of the said Act shall be applied for and they shall dispose of the applications in accordance with law either by issuing information or refusing to give information.

In the event of refusal to give the information sought by a public, such of the applicant is entitled to make an appeal to the Registrar, Karnataka Administrative Tribunal, Bangalore under Section 19 of the said Act within the prescribed period. Therefore, the Registrar, Karnataka Administrative Tribunal, is designated as the Appellate Authority as provided under Section 19 of the said Act.

BY ORDER OF HON'BLE THE CHAIRMAN,
REGISTRAR, I/c
Karnataka Administrative Tribunal, Bangalore.

P.R. 1759

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಮಂಡ್ಯ ಉಪವಿಭಾಗ-2, ಮಂಡ್ಯ**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:133/2005**

**ಅರ್ಜಿದಾರರು :**

1) ಶ್ರೀಮತಿ ದೇವಂತಿದೇವಿ 2) ಸೂರಜ್ ಪ್ರಸಾದ್ ಮೆಹತಾ
3) ಸ್ವಪ್ತ ಕುಮಾರಿ ಮೆಹತಾ 4) ಸಾಗರ್ ಕುಮಾರ್ ಮೆಹತಾ
ಖಾಯಂ ವಿಳಾಸ: ಗೋವನ್ ಜಲಂದರ್ ತಾಣ ನಂ.59, ಹಜರಿಬಾಗ್ ಜಿಲ್ಲೆ, ಜಾರ್ಕಂಡ್ ರಾಜ್ಯ
ಪ್ರಸ್ತುತ ವಿಳಾಸ: ನಂ.430, 5ನೇ ಕ್ರಾಸ್, ಸ್ವರ್ಣಸಂದ್ರ, ಮಂಡ್ಯ ಸಿಟಿ.

**ವಿರುದ್ಧ**

**ಪ್ರತಿವಾದಿಗಳು:**

1) ಸೋಮ ಎಂಟರ್ ಪ್ರೈಸಸ್ ಲಿ., ಕೆ.ಎಂ.112, ಬೆಂಗಳೂರು-ಮೈಸೂರು ರಸ್ತೆ, ರಾಗಿ ಮುದ್ದನಹಳ್ಳಿ ಗ್ರಾಮ, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ.
2) ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ಮಂಡ್ಯ ಜಿಲ್ಲೆ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ದೇವಂತಿ ದೇವಿ ಅವರು ತಮ್ಮ ಗಂಡನಾದ ಶ್ರೀ ಮುರಳಿ ಪ್ರಸಾದ್ ಮೆಹತಾ ಅವರು ಒಂದನೇ ಪ್ರತಿವಾದಿ ಶ್ರೀ ಸೋಮ ಎಂಟರ್ ಪ್ರೈಸಸ್ ಲಿ., ರವರ ಬಳಿ ಚಾಲಕ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 12.4.2005 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 9.11.2005 ರಂದು ನೀಡಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ-2, ಮಂಡ್ಯ.

ಪಿ.ಆರ್. 1760

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಮಂಡ್ಯ ಉಪವಿಭಾಗ-2, ಮಂಡ್ಯ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:71/2005**

**ಅರ್ಜಿದಾರರು :**

1) ಬೋಟ್ಲಾ ಸೂರ್ಯ ನಾರಾಯಣ 2) ಬೋಟ್ಲಾ ಅಚ್ಚಮ್ಮ
ಖಾಯಂ ವಿಳಾಸ: ಮಾಣಿಕೊಂಡ ಗ್ರಾಮ, ಕೃಷ್ಣ ಜಿಲ್ಲೆ,
ಆಂಧ್ರ ಪ್ರದೇಶ 521 260.
ಈಗಿನ ವಿಳಾಸ: ನಂ.286, ಸ್ವರ್ಣಸಂದ್ರ, ಮಂಡ್ಯ ಸಿಟಿ,
ಮಂಡ್ಯ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1) ಸೋಮ ಎಂಟರ್ ಪ್ರೈಸಸ್ ಲಿ.,
ಕೆ.ಎಂ.112, ಬೆಂಗಳೂರು-ಮೈಸೂರು ರಸ್ತೆ, ರಾಗಿ ಮುದ್ದನಹಳ್ಳಿ ಗ್ರಾಮ, ಪಾಂಡವಪುರ ತಾಲ್ಲೂಕು,
ಮಂಡ್ಯ ಜಿಲ್ಲೆ.
2) ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ.,
ಮಂಡ್ಯ ಜಿಲ್ಲೆ.

**ಪ್ರಕಟಣೆ**

ಅರ್ಜಿದಾರರಾದ ಬೋಟ್ಲಾ ಸೂರ್ಯ ನಾರಾಯಣ ಅವರು ತಮ್ಮ ಮಗನಾದ ಶ್ರೀ ಬೋಟ್ಲಾ ಸೂರಿ ಉ: ಬೋಟ್ಲಾ ಸೂರ್ಯಬಾಬು ಅವರು ಒಂದನೇ ಪ್ರತಿವಾದಿ ಶ್ರೀ ಸೋಮ ಎಂಟರ್ ಪ್ರೈಸಸ್ ಲಿ., ರವರ ಬಳಿ ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 29.3.2005 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 9.11.2005 ರಂದು ನೀಡಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ-2, ಮಂಡ್ಯ.

ಪಿ.ಆರ್. 1761

**ವಸತಿ ಇಲಾಖೆ**

**ಅಧಿಸೂಚನೆ ಸಂಖ್ಯೆ: ವಇ 59 ಕೊಮಂಲೆ 2004, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2005**

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಗದಗ-ಬೆಟಗೇರಿ ನಗರ ಸಭೆಯ ವ್ಯಾಪ್ತಿಯಲ್ಲಿ ಬರುವ ವಿವೇಕಾನಂದ ಕೊಳಚೆ ಪ್ರದೇಶವನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಯುಡಿ 189 ಎಂಸಿಎಸ್ 81 ದಿನಾಂಕ : 17-08-1983 ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 3 (1) ರಂತೆ ಕೊಳಚೆ ಪ್ರದೇಶವೆಂದು ಘೋಷಿಸಲಾಗಿದೆ. ನಂತರ ಜಿಲ್ಲಾಧಿಕಾರಿಗಳು ಗದಗ್ ಜಿಲ್ಲೆ, ಗದಗ್ ಇವರ ಅಧಿಸೂಚನೆ ಸಂಖ್ಯೆ: ಕಕೊನಿ/ವಹಿ/2/2000-2001, ದಿನಾಂಕ: 30-06-2001ರಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನಾ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಅಧಿನಿಯಮ 1973 ಕಲಂ 11 ರಂತೆ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತಾರೆ.

ಸದರಿ ಪ್ರದೇಶವನ್ನು ಅಭಿವೃದ್ಧಿಗೊಳಿಸಿ ಅಲ್ಲಿ ವಾಸಿಸುವ ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾಋವು ಉದ್ದೇಶಿಸಿದೆ ಹಾಗೂ ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 ರ ಅಧಿನಿಯಮ ಕಲಂ 17 ರಂತೆ ಭೂಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವೆಂದು ಮನಗಂಡು ಸರ್ಕಾರದ ಅಧಿಸೂಚನೆ ಸಂಖ್ಯೆ: ವಇ 58 ಕೊಮಂಲೆ 2002,
ದಿನಾಂಕ : 18-11-2003ರಲ್ಲಿ ಪ್ರಾರಂಭಿಕವಾಗಿ ಘೋಷಿಸಿ ಸಂಬಂಧಿಸಿದವರಿಂದ /ಸಾರ್ವಜನಿಕರಿಂದ / ಆಸಕ್ತಿಯುಳ್ಳವರಿಂದ ಆಕ್ಷೇಪಣೆ /ಸಲಹೆ ಹಾಗೂ ಮನವಿಗಳಿದ್ದಲ್ಲಿ 15 ದಿನಗಳಲ್ಲಿ ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿತ್ತು. ಈ ಬಗ್ಗೆ ಸಂಬಂಧಪಟ್ಟ ಭೂಮಾಲೀಕರಿಂದಾಗಲೀ ಅಥವಾ ಸಾರ್ವಜನಿಕರಿಂದಾಗಲೀ ಯಾವುದೇ ತಕರಾರು/ ಆಕ್ಷೇಪಣೆ ಬಂದಿರುವುದಿಲ್ಲವೆಂದು ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಧಾರವಾಡ ಇವರು ವರದಿ ನೀಡಿದ್ದು, ಈ ಕೊಳಚೆ ಪ್ರದೇಶವನ್ನು ಅಧಿನಿಯಮ 17 ರಂತೆ ಅಂತಿಮವಾಗಿ ಭೂಸ್ವಾಧೀನಪಡಿಸಿಕೊಂಡು ಅಧಿಸೂಚನೆ ಹೊರಡಿಸುವಂತೆ ಕೋರಿರುತ್ತಾರೆ.

ಸದರಿ ಪ್ರದೇಶವು ಕೊಳಚಿ ನಿವಾಸಿಗಳಿಗೆ ಪುನರ್ವಸತಿ ಅಗತ್ಯವಿರುವುದರಿಂದ ನಿಯಮಾನುಸಾರ ಪರಿಹಾರವನ್ನು ಭೂಸ್ವಾಧೀನಾಧಿಕಾರಿ ನಿಗಧಿಪಡಿಸುವರೆಂದು ಸೂಚಿಸಲಾಗಿದೆ. ಸದರಿ ಪ್ರದೇಶವನ್ನು ಅಭಿವೃದ್ದಿಪಡಿಸಲು ಹಾಗೂ ಆ ಪ್ರದೇಶದಲ್ಲಿ ಕೊಳಚಿ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾರವು ಮನಗಂಡಿರುವುದರಿಂದ ಷೆಡ್ಯೂಲ್‌ನಲ್ಲಿ ತಿಳಿಸಿರುವ ಕೊಳಚಿ ಪ್ರದೇಶಗಳನ್ನು ಭೂಸ್ವಾಧೀನಪಡಿಸಿಕೊಳ್ಳಲು ತೀರ್ಮಾನಿಸಿ ಕೊಳಚಿ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 ರ ಕಲಂ 17ರನ್ವಯ ಷೆಡ್ಯೂಲ್ ನಲ್ಲಿ ತಿಳಿಸಿರುವ ಜಮೀನನ್ನು ಅಂತಿಮವಾಗಿ ಭೂಸ್ವಾಧೀನಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಘೋಷಿಸಲಾಗಿದೆ.

ಷೆಡ್ಯೂಲ್

| ಕೊಳಚಿ ಪ್ರದೇಶದ ಹೆಸರು ಮತ್ತು ಇರುವ ಸ್ಥಳ | ಭೂ ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ ಎ - ಗುಂ | ಚಕ್ಕುಬಂಧಿ |
|---|---|---|---|---|
| ವಿವೇಕಾನಂದ ಕೊಳಚಿ ಪ್ರದೇಶ ಗದಗ - ಬೆಟಗೇರಿ | ಅಂಗ್ಲೋ ಉರ್ದು ಸ್ಕೂಲ್ ಕಮಿಟಿ | ಸಿ.ಟಿ.ಎಸ್. ನಂ.6662 ಎ 1ಎ:1 | 1.04 | ಪೂರ್ವ - ವಿವೇಕಾನಂದ ರೋಡ್<br>ಪಶ್ಚಿಮ - ರೈಲ್ವೆ ಜಮೀನು<br>ಉತ್ತರ - ಸಿಟಿಎಸ್ ನಂ, 6663<br>ದಕ್ಷಣ - ಸಿ.ಟಿ.ಎಸ್ ನಂ. 6662 : ಎ 2 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1765

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ.

## ಒಳಾಡಳಿತ ಇಲಾಖೆ

### ಅಧಿಸೂಚನೆ ಸಂಖ್ಯೆ: ಒಇ 774 ಪಿಪಿಇ 2005, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2005

ಈ ಕೆಳಕಂಡ ತಃಖ್ತೆಯ ಅಂಕಣ (2) ರಲ್ಲಿ ಸೂಚಿಸಿರುವ ನ್ಯಾಯಾಲಯಗಳಲ್ಲಿ ತಃಖ್ತೆಯ ಅಂಕಣ (3) ಮತ್ತು (4) ರಲ್ಲಿ ನಮೂದಿಸಿರುವ ಪ್ರಕರಣ ಮತ್ತು ಪ್ರತಿ ಪ್ರಕರಣಗಳು ದಾಖಲಾಗಿರುತ್ತವೆ. ಆದ ಕಾರಣ, ಅಂಕಣ 4ರಲ್ಲಿ ನಮೂದಿಸಿರುವ ಪ್ರತಿ ಪ್ರಕರಣಗಳಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣವನ್ನು ನಡೆಸಲು ಅಂಕಣ 5 ರಲ್ಲಿ ಸೂಚಿಸಿರುವ ಅಭಿಯೋಜಕರನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಿದೆ.

| ಕ್ರಮ ಸಂಖ್ಯೆ | ನ್ಯಾಯಾಲಯದ ಹೆಸರು | ಪ್ರಕರಣ ಸಂಖ್ಯೆ S.C. | ಪ್ರತಿಪ್ರಕರಣ ಸಂಖ್ಯೆ S.C. | ಪ್ರತಿಪ್ರಕರಣದಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣವನ್ನು ನಡೆಸಲು |
|---|---|---|---|---|
| 1 | 2 | 3 | 4 | 5 |
| 1 | 1 ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಚಿಕ್ಕೋಡಿ | 135/02 | 259/02 | 1 ನೇ ಅಧಿಕ ಸರ್ಕಾರಿ ಅಭಿಯೋಜಕರು, 1ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿ |
| 2 | 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಧಾರವಾಡ | 56/04 | 13/05 | ವಿಶೇಷ ಸರ್ಕಾರಿ ಅಭಿಯೋಜಕರು 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಧಾರವಾಡ. |
| 3 | 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೀದರ್ | 108/2000 | 120/03 | ವಿಶೇಷ ಸರ್ಕಾರಿ ಅಭಿಯೋಜಕರು 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೀದರ್. |
| 4 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ | 192/2003 | 28/03 | ಸರ್ಕಾರಿ ಅಭಿಯೋಜಕರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ |
| 5 | ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ | 42/2004 | 36/04 | ಸರ್ಕಾರಿ ಅಭಿಯೋಜಕರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ |
| 6 | 3ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ | 175/04 | 37/05 | ವಿಶೇಷ ಸರ್ಕಾರಿ ಅಭಿಯೋಜಕರು 4ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ |
| 7 | 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ | 107/01 | 205/01 | ವಿಶೇಷ ಸರ್ಕಾರಿ ಅಭಿಯೋಜಕರು 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ |
| 8 | 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ | 39/99 | 74/99 | ವಿಶೇಷ ಸರ್ಕಾರಿ ಅಭಿಯೋಜಕರು 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ |
| 9 | 1ನೇ ತ್ವರಿತ ವಿಲೇವಾರಿ ನ್ಯಾಯಲಯ, ಬೆಳಗಾವಿ | 151/03 | 9/04 | ವಿಶೇಷ ಸರ್ಕಾರಿ ಅಭಿಯೋಜಕರು 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ |
| 10 | 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ | 203/97 | 41/98 | ವಿಶೇಷ ಸರ್ಕಾರಿ ಅಭಿಯೋಜಕರು 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ |
| 11 | 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ | 72/01 | 73/01 | ವಿಶೇಷ ಸರ್ಕಾರಿ ಅಭಿಯೋಜಕರು 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಳಗಾವಿ |
| 12 | 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು | 1363/99 | 1874/99 | ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು |
| 13 | 3ನೇ ತ್ವರಿತ ವಿಲೇವಾರಿ ನ್ಯಾಯಾಲಯ, ರಾಯಚೂರು | 126/04 | 64/05 | ವಿಶೇಷ ಸರ್ಕಾರಿ ಅಭಿಯೋಜಕರು 2ನೇ ತ್ವರಿತ ವಿಲೇವಾರಿ ನ್ಯಾಯಾಲಯ, ರಾಯಚೂರು |

| ಕ್ರಮ ಸಂಖ್ಯೆ | ನ್ಯಾಯಾಲಯದ ಹೆಸರು | ಪ್ರಕರಣ ಸಂಖ್ಯೆ S.C. | ಪ್ರತಿಪ್ರಕರಣ ಸಂಖ್ಯೆ S.C. | ಪ್ರತಿಪ್ರಕರಣದಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣವನ್ನು ನಡೆಸಲು |
|---|---|---|---|---|
| 14 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ | 14/03 ಸ್ಪಷಲ್ SC/ST | 31/05 | ವಿಶೇಷ ಸರ್ಕಾರಿ ಅಭಿಯೋಜಕರು, ತ್ವರಿತ ವಿಲೇವಾರಿ ನ್ಯಾಯಾಲಯ, ಹಾವೇರಿ |
| 15 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ | 19/04 | 11/05 | ವಿಶೇಷ ಸರ್ಕಾರಿ ಅಭಿಯೋಜಕರು, ತ್ವರಿತ ವಿಲೇವಾರಿ ನ್ಯಾಯಾಲಯ, ಹಾವೇರಿ |
| 16 | 2ನೇ ಜೆಎಂಎಫ್‌ಸಿ ನ್ಯಾಯಾಲಯ, ಚಿತ್ರದುರ್ಗ | 776/02 | 773/02 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಚಿತ್ರದುರ್ಗ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1766

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾಯದರ್ಶಿ

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಕಾಪಿಪೊಸ ಮತ್ತು ಅಭಿಯೋಗಗಳು)

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ-2, ಹಾಸನ

**ಸಂಖ್ಯೆ: ಡಬ್ಲ್ಯೂಸಿಎ:ಎಫ್:ಎಸ್‌ಆರ್:39/2005 ದಿನಾಂಕ: 9ನೇ ನವೆಂಬರ್ 2005**

**ಅರ್ಜಿದಾರರು :**

1) ಕವಿತಾ ಕೋಂ ಲೇಟ್ ಶಿವಣ್ಣ, 24 ವರ್ಷ
2) ರಕ್ಷಿತ ಬಿನ್ ಲೇಟ್ ಶಿವಣ್ಣ, 6 ವರ್ಷ
3) ಅಮೃತ ಬಿನ್ ಲೇಟ್ ಶಿವಣ್ಣ, 4 ವರ್ಷ
4) ತಿಮ್ಮೇಗೌಡ ಬಿನ್ ಮಳಲೀಗೌಡ, 60 ವರ್ಷ, ತಿಮ್ಲಾಪುರ ಗ್ರಾಮ, ಅಟ್ಟಾವರ ಅಂಚೆ, ದುದ್ದ ಹೋಬಳಿ, ಹಾಸನ ತಾಲ್ಲೂಕು.

**ವಿರುದ್ಧ** **ಪ್ರತಿವಾದಿಗಳು:**

1) ಶಿವಾನಂದ ಮೂರ್ತಿ ಬಿನ್ ಶಿವರುದ್ರಪ್ಪ, ನಂ.86, 7ನೇ ಇ ಮೈನ್, 2ನೇ ಬ್ಲಾಕ್, 3ನೇ ಹಂತ, ಡಬ್ಲ್ಯೂಸಿಆರ್, ವರ್ದಮಾನ್ ಜ್ಯೂಯಲರ್ಸ್ ಹಿಂಭಾಗ, ಬಸವೇಶ್ವರ ನಗರ, ಡಬ್ಲ್ಯೂಓಸಿ ರಸ್ತೆ, ಬೆಂಗಳೂರು-560 079.
2) ದಿ ಬ್ರಾಂಚ್ ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಬ್ರಿಗೇಡ್ ಪ್ಲಾಜ, ಎನ್ 202, ಎಸ್.ಸಿ.ರಸ್ತೆ, ಬೆಂಗಳೂರು-9.
ಪ್ರತಿನಿಧಿಸುವವರು:
ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಹಾಸನ.

### ಪ್ರಕಟಣೆ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶಿವಣ್ಣ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 5.6.2005 ರಂದು ಸಾವನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎನ್. ರಾಮಕೃಷ್ಣ**

ಪಿ.ಆರ್. 1762

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ಚಿಕ್ಕಮಗಳೂರು ಜಿಲ್ಲೆ

**ಸಂಖ್ಯೆ: ಕಾಪಕಾ:ಎಫ್ 14/2004**

**ಅರ್ಜಿದಾರರು :**

1) ಶ್ರೀ ಎಂ. ಬಸವರಾಜು ಬಿನ್ ಲೇಟ್ ಬಿ. ಮಹದೇವಪ್ಪ,
2) ಮಾಸ್ಟರ್ ಚೇತನ, 3) ಮಾಸ್ಟರ್ ವಿಜಯ ಕುಮಾರ್, R/o ಸಲೆಬೋರನಹಳ್ಳಿ, ರಂಗೇನಹಳ್ಳಿ ವಿಲೇಜ್ ಮತ್ತು ಅಂಚೆ, ತರೀಕೆರೆ ತಾ:

**ವಿರುದ್ಧ** **ಪ್ರತಿವಾದಿಗಳು:**

1) ಶ್ರೀ ಬಿ. ವಾಸುದೇವನ್ ಬಿನ್ ಟಿಂಬರ್ ಪಾಲಿ, ರಂಗೇನಹಳ್ಳಿ ವಿಲೇಜ್ ಮತ್ತು ಅಂಚೆ, ಟಿ-1914 ತರೀಕೆರೆ ತಾ:
ದಿ ನ್ಯೂ ಇಂಡಿಯಾ ಇನ್ಸುರೆನ್ಸ್ ಕಂ. ಲಿ.,
2) ಪಾಂಡುರಂಗ ಕಾಂಪ್ಲೆಕ್ಸ್, ಚಿಕ್ಕಮಗಳೂರು ಜಿಲ್ಲೆ ಸಿಟಿ.

### ಪ್ರಕಟಣೆ

ಬಿ. ಮಹದೇವಪ್ಪ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 14.5.2004 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ

ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಆರ್.ಬಿ. ಬಾಗೇವಾಡಿ**

ಪಿ.ಆರ್. 1763

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-1, ಚಿಕ್ಕಮಗಳೂರು.

## ಕರ್ನಾಟಕ ಅರಣ್ಯ ಇಲಾಖೆ

### ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ಪ್ರಾಧಿಕಾರ

### 'ಇದಕ್ಕೆ ಯಾರು ಸಂಬಂಧಪಟ್ಟವರೋ ಅವರಿಗೆ ನೋಟೀಸ್'

ಚಿತ್ರದುರ್ಗ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಕಳ್ಳಸಾಗಾಣಿಕೆಗಾಗಿ ಬಳಸಲಾಗಿದ್ದ ಈ ಕೆಳಕಂಡ ವಾಹನವನ್ನು ಮತ್ತು ಅದರಲ್ಲಿ ತುಂಬಿದ್ದ ಶ್ರೀಗಂಧವನ್ನು ಅಮಾನತ್ತು ಪಡಿಸಿಕೊಳ್ಳಲಾಗಿದೆ. ವಶಪಡಿಸಿಕೊಳ್ಳಲಾಗಿರುವ ವಾಹನಗಳ ವಿವರ ಈ ಕೆಳಗಿನಂತಿರುತ್ತದೆ.

| ಕ್ರ.ಸಂ. | ವಾಹನದ ಹೆಸರು | ನೋಂದಾಣಿ ಸಂಖ್ಯೆ | ಇಂಜಿನ್ ನಂ. | ಚಾಸ್ಸಿ ನಂ. | ವಾಹನ ವಶಪಡಿಸಿಕೊಂಡ ದಿನಾಂಕ: |
|---|---|---|---|---|---|
| 1 | ಅರ್ಮುಡಾ ಜೀಪ್ | ಕೆಎ-02 ಎನ್-5709 | ಡಿ.ವಿ.25337 | 2 ಇವಿ.25337 | 22-3-2003 |

ಮೇಲ್ಕಂಡ ವಾಹನದ ಮಾಲೀಕರಿಗೆ ಅಥವಾ ಸಂಬಂಧಪಟ್ಟವರಿಗೆ ಈ ಪತ್ರ ಪ್ರಕಟಣೆಯ ಮೂಲಕ ತಿಳಿಸುವುದೇನೆಂದರೆ, ಮೇಲ್ಕಂಡ ವಾಹನಕ್ಕೆ ಸಂಬಂಧಿಸಿದ ಅವಶ್ಯಕವಾದ ದಾಖಲಾತಿಗಳೊಂದಿಗೆ ಈ ಪ್ರಕಟಣೆಯ ಪ್ರಕಟಗೊಂಡ (15) ದಿನದೊಳಗಾಗಿ ಈ ಪ್ರಾಧಿಕಾರಕ್ಕೆ ತಮ್ಮ ಅಹವಾಲುಗಳನ್ನು ಸಲ್ಲಿಸಲು ಈ ಮೂಲಕ ತಿಳಿಯಪಡಿಸಿದೆ.

ಈ ಮೇಲ್ಕಂಡ ಪ್ರಕಟಣೆಯ ಪ್ರಕಟಿತಗೊಂಡ (15) ದಿನದೊಳಗಾಗಿ ಯಾರೂ ತಮ್ಮ ಅಹವಾಲನ್ನು ಸಲ್ಲಿಸದೆ ಇದ್ದ ಪಕ್ಷದಲ್ಲಿ ಸದರಿ ವಾಹನಕ್ಕೆ ಸಂಬಂಧಿಸಿದ ವಾಹನದ ವಾರಸುದಾರರು ಯಾರೂ ಇಲ್ಲವೆಂದು ಪರಿಗಣಿಸಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್-71(ಎ) ಪ್ರಕಾರ ಏಕಪಕ್ಷೀಯವಾಗಿ ಕ್ರಮ ಕೈಗೊಂಡು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 1764

ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

### ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ

**ಹಾಜರಿ:** ಶ್ರೀ ಆರ್. ರಾಜಶೇಖರ್,
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಸಿಟಿಟಿ-3405 (ಮ್ಯಾಕ್ಸ್) ಇದರ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** ವಾಹನ ಮಾಲೀಕರು ಶ್ರೀ ಸಿ.ವಿ. ಕೀರ್ತಿಕುಮಾರ್, ಬೀರೂರು, ಕಡೂರು ತಾ: ಇವರ ಅರ್ಜಿ ದಿನಾಂಕ: 06.10.2005.

ವಾಹನ ಸಂಖ್ಯೆ: ಸಿಟಿಟಿ-3405 (ಮ್ಯಾಕ್ಸ್) ವಾಹನದ ನೋಂದಾಯಿತ ಮಾಲೀಕರಾದ ಶ್ರೀ ಸಿ.ವಿ. ಕೀರ್ತಿಕುಮಾರ್, ಬೀರೂರು ಅಂಚೆ, ಕಡೂರು ತಾ: ಇವರು ಸದರಿ ವಾಹನದ ತೆರಿಗೆಯನ್ನು ದಿನಾಂಕ: 31.10.2005 ರವರೆಗೆ ಪಾವತಿಸಿದ್ದು, ದಿನಾಂಕ: 06.10.2005 ರಂದು ಕಛೇರಿಗೆ ಸದರಿ ವಾಹನ ಎಲ್ಲಾ ದಾಖಲೆಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಈಗ ಹಳೆಯದಾಗಿದ್ದು, ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ಹಾಗೂ ದುರಸ್ಥಿ ದುಬಾರಿ ಆಗಿರುವುದರಿಂದ ನೋಂದಣಿ ರದ್ದು ಪಡಿಸಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ಮಾಲೀಕರ ಕೋರಿಕೆಯಂತೆ ಈ ವಾಹನದ ನೋಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಪ್ರಾಸಾಅ:ಚಿಮ:ಎಫ್‌ಟಿ:ಸಾರಿಗೆ:2005-06, ದಿನಾಂಕ: 18ನೇ ಅಕ್ಟೋಬರ್ 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55 ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು, ವಾಹನ ಸಂಖ್ಯೆ: ಸಿಟಿಟಿ-3405 (ಮ್ಯಾಕ್ಸ್) ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡು ಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**
1) ವಾಹನ ಸಂಖ್ಯೆ : ಸಿಟಿಟಿ-3405 (ಮೆಟಾಡೋರ್)
2) ವರ್ಗ : ಮ್ಯಾಕ್ಸ್ (12 + 1)
3) ಚಾಸಿಸ್ ಸಂಖ್ಯೆ : 616 ಎಫ್‌ಡಿ 312473
4) ಇಂಜಿನ್ ಸಂಖ್ಯೆ : 616 969 013828
5) ಮಾಡೆಲ್ : 1986
6) ಹೆಚ್‌ಪಿಎ : ಇರುವುದಿಲ್ಲ
7) ಮಾಲೀಕರು: : ಶ್ರೀ ಸಿ.ವಿ. ಕೀರ್ತಿಕುಮಾರ್ ಬಿನ್ ಸಿ.ಆರ್. ವೀರಭದ್ರಪ್ಪ, ಅಕ್ಕಮಹಾದೇವಿ ಶಾಲಿ ಹತ್ತಿರ, ಬೀರೂರು ಅಂಚೆ, ಕಡೂರು ತಾ:, ಚಿಕ್ಕಮಗಳೂರು ಜಿಲ್ಲೆ.

**ಆರ್. ರಾಜಶೇಖರ್**

ಪಿ.ಆರ್. 1767

ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಚಿಕ್ಕಮಗಳೂರು.

### ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ

**ಹಾಜರಿ:** ಶ್ರೀ ಆರ್. ರಾಜಶೇಖರ್,
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಸಿಟಿಟಿ-9726 (ಹೆಚ್‌ಜಿವಿ) ಇದರ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** ವಾಹನ ಮಾಲೀಕರು ಶ್ರೀ ಟಿ. ಮಲ್ಲಿಕಾರ್ಜುನ ಬಿನ್ ತಮ್ಮಯ್ಯ, ನೇರಲಕೆರೆ, ತರೀಕೆರೆ ತಾಲ್ಲೂಕು, ಇವರ ಅರ್ಜಿ ದಿನಾಂಕ: 25.10.2005.

ವಾಹನ ಸಂಖ್ಯೆ: ಸಿಟಿಎ-9726 (ಹೆಚ್‌ಜಿವಿ) ವಾಹನದ ನೋಂದಾಯಿತ ಮಾಲೀಕರಾದ ಶ್ರೀ ಟಿ. ಮಲ್ಲಿಕಾರ್ಜುನ, ನೇರಲಕೆರೆ, ತರೀಕೆರೆ ತಾಲ್ಲೂಕು, ಇವರು ಸದರಿ ವಾಹನದ ತೆರಿಗೆಯನ್ನು ದಿನಾಂಕ: 31.10.2005 ರವರೆಗೆ ಪಾವತಿಸಿದ್ದು, ದಿನಾಂಕ: 25.10.2005 ರಂದು ಕಛೇರಿಗೆ ಸದರಿ ವಾಹನ ಎಲ್ಲಾ ದಾಖಲೆಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಈಗ ಹಳೆಯದಾಗಿದ್ದು, ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ಹಾಗೂ ದುರಸ್ಥಿ ದುಬಾರಿ ಆಗಿರುವುದರಿಂದ ನೋಂದಣಿ ರದ್ದು ಪಡಿಸಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ಮಾಲೀಕರ ಕೋರಿಕೆಯಂತೆ ಈ ವಾಹನದ ನೋಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಪ್ರಾಸಾಅ:ಚಿಮ:ಎಫ್‌ಟಿ:ಸಾರಿಗೆ:2004-05, ದಿನಾಂಕ: 26ನೇ ಅಕ್ಟೋಬರ್ 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55 ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು, ವಾಹನ ಸಂಖ್ಯೆ: ಸಿಟಿಎ-9726 (ಹೆಚ್‌ಜಿವಿ) ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡು ಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**

1) ವಾಹನ ಸಂಖ್ಯೆ : ಸಿಟಿಎ-9726
2) ವರ್ಗ : ಹೆಚ್‌ಜಿವಿ ಟಾಟಾ
3) ಚಾಸಿಸ್ ಸಂಖ್ಯೆ : 363 052 290737
4) ಇಂಜಿನ್ ಸಂಖ್ಯೆ : 692 ಡಿ02 298833
5) ಮಾಡೆಲ್ : 1988
6) ಹೆಚ್‌ಪಿಎ : ಇಲ್ಲ
7) ಮಾಲೀಕರು: : ಶ್ರೀ ಟಿ. ಮಲ್ಲಿಕಾರ್ಜುನ ಬಿನ್ ತಮ್ಮಯ್ಯ, ನೇರಲಕೆರೆ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

**ಆರ್. ರಾಜಶೇಖರ್**

ಪಿ.ಆರ್. 1768 ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಚಿಕ್ಕಮಗಳೂರು.

**ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ**

**ಹಾಜರಿ:** ಶ್ರೀ ಆರ್. ರಾಜಶೇಖರ್,
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಸಿಎನ್‌ಎಕ್ಸ್-5206 (ಶಾವಾ) ಇದರ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** ವಾಹನ ಮಾಲೀಕರು ಶ್ರೀ ಸೆಕ್ರೆಟರಿ, ಸಂಜೀವಿನಿ ವಿದ್ಯಾ ಸಂಸ್ಥೆ, ಚಿಕ್ಕಮಗಳೂರು ಇವರ ಅರ್ಜಿ ದಿನಾಂಕ: 18.10.2005.

ವಾಹನ ಸಂಖ್ಯೆ: ಸಿಎಸ್‌ಎಕ್ಸ್-5206 (ಶಾಲಾ ವಾಹನ) ವಾಹನದ ನೋಂದಾಯಿತ ಮಾಲೀಕರಾದ ಶ್ರೀ ಕಾರ್ಯದರ್ಶಿ, ಸಂಜೀವಿನಿ ವಿದ್ಯಾ ಸಂಸ್ಥೆ, ಚಿಕ್ಕಮಗಳೂರು ಇವರು ಸದರಿ ವಾಹನದ ತೆರಿಗೆಯನ್ನು ದಿನಾಂಕ: 31.11.2005 ರವರೆಗೆ ಪಾವತಿಸಿದ್ದು, ದಿನಾಂಕ: 18.10.2005 ರಂದು ಕಛೇರಿಗೆ ಸದರಿ ವಾಹನ ಎಲ್ಲಾ ದಾಖಲೆಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಈಗ ಹಳೆಯದಾಗಿದ್ದು, ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ಹಾಗೂ ದುರಸ್ಥಿ ದುಬಾರಿ ಆಗಿರುವುದರಿಂದ ನೋಂದಣಿ ರದ್ದು ಪಡಿಸಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ಮಾಲೀಕರ ಕೋರಿಕೆಯಂತೆ ಈ ವಾಹನದ ನೋಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಪ್ರಾಸಾಅ:ಚಿಮ:ಎಫ್‌ಟಿ:ಸಾರಿಗೆ:2004-05, ದಿನಾಂಕ: 25ನೇ ಅಕ್ಟೋಬರ್ 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55 ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು, ವಾಹನ ಸಂಖ್ಯೆ: ಸಿಎಸ್‌ಎಕ್ಸ್-5206 (ಶಾಲಾ ವಾಹನ) ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡು ಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**

1) ವಾಹನ ಸಂಖ್ಯೆ : ಸಿಎನ್‌ಎಕ್ಸ್-5206
2) ವರ್ಗ : ಶಾಲಾ ವಾಹನ ಟಾಟಾ
3) ಚಾಸಿಸ್ ಸಂಖ್ಯೆ : 344050 143096
4) ಇಂಜಿನ್ ಸಂಖ್ಯೆ : 692 ಡಿ 03 150588
5) ಮಾಡೆಲ್ : 1983
6) ಹೆಚ್‌ಪಿಎ : ಇರುವುದಿಲ್ಲ.
7) ಮಾಲೀಕರು: : ಶ್ರೀ ಸೆಕ್ರೆಟರಿ, ಸಂಜೀವಿನಿ ವಿದ್ಯಾ ಸಂಸ್ಥೆ, ಚಿಕ್ಕಮಗಳೂರು

**ಆರ್. ರಾಜಶೇಖರ್**

ಪಿ.ಆರ್. 1769 ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಚಿಕ್ಕಮಗಳೂರು.

**ಪೊಲೀಸ್ ಇನ್ಸ್‌ಪೆಕ್ಟರ್, ಕುಮಾರಸ್ವಾಮಿ ಲೇಔಟ್, ಪೊಲೀಸ್ ಠಾಣೆ, ಬೆಂಗಳೂರು**

**ದಿನಾಂಕ: 7ನೇ ನವೆಂಬರ್ 2005**

**ವಿಷಯ :** ವಾರಸುದಾರರಿಲ್ಲದೇ ಹಾಗೂ ಅಮಾನತು ಪಡಿಸಿರುವ ವಾಹನಗಳ ಮಾಲೀಕರ ಪತ್ತೆಯಾಗದೇ ಇರುವುದರ ಬಗ್ಗೆ.

**ಉಲ್ಲೇಖ :** ಕುಮಾರಸ್ವಾಮಿ ಲೇ ಔಟ್ ಪೊಲೀಸ್ ಠಾಣೆ ಮೊ.ಸಂಖ್ಯೆ: 360/02. ಪಿ.ಎಫ್. ನಂ:113/02 ಒಂದು ಅಶೋಕ್ ಲೈಲಾಂಡ್ ಲಾರಿ ನಂ: ಕೆಎಲ್-13 ಹೆಚ್-9232, ಒಂದು ಟಾಟಾ ಲಾರಿ ನಂಬರ್ ಎಲ್ಲಾ.

**ಪ್ರಕಟಣೆ**

ಈ ಮೇಲ್ಕಂಡ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ ಕೆ.ಎಸ್. ಲೇ ಔಟ್ ಪೊಲೀಸ್ ಠಾಣಾ ಮೊ.ಸಂ:360/02 ರಲ್ಲಿ ಎರಡು ಲಾರಿಗಳನ್ನು ಠಾಣಾ ಪಿ.ಎಫ್. ನಂ:113/02 ರಲ್ಲಿ ಅಮಾನತು ಪಡಿಸಿರುತ್ತದೆ. ಮತ್ತು ಮೊ.ಸಂ.321/02 ರಲ್ಲಿ ಒಂದು ಕಾರನ್ನು ಠಾಣಾ ಪಿ.ಎಫ್. ನಂ.91/03 ರಲ್ಲಿ ಅಮಾನತು ಪಡಿಸಿರುತ್ತದೆ. ಹಾಗೂ ಠಾಣಾ ಮೊ.ಸಂ.112/03 ರಲ್ಲಿ ಒಟ್ಟು 8 ಆಟೋರಿಕ್ಷಾಗಳನ್ನು ಅಮಾನತುಪಡಿಸಿದ್ದು, 5 ಆಟೋರಿಕ್ಷಾಗಳ ಮಾಲೀಕರುಗಳು ಪತ್ತೆಯಾಗಿರುವುದಿಲ್ಲ. ಅವುಗಳನ್ನು ಠಾಣಾ ಪಿ.ಎಫ್.ನಂ: 41/03, 42/03, 43/03, 46/03, 47/03 ರಲ್ಲಿ ಅಮಾನತು ಪಡಿಸಿರುತ್ತದೆ. ಈ 5 ಆಟೋರಿಕ್ಷಾ ಮಾಲೀಕರ ಪತ್ತೆಗಾಗಿ ಕೇರಳ ರಾಜ್ಯಕ್ಕೆ ಸಿಬ್ಬಂದಿಯವರನ್ನು ಕಳುಹಿಸಿದ್ದು, ಆರ್.ಟಿ.ಓ. ನಿಂದ ಆರ್.ಸಿ. ಮಾಲೀಕರ ವಿಳಾಸಗಳನ್ನು ಪಡೆದು ವಿಚಾರ ಮಾಡಿದ್ದು, ವಿಳಾಸಗಳ ತಪ್ಪು ವಿಳಾಸಗಳಾಗಿದ್ದು, ಹೆಚ್.ಸಿ. 2044 ಶ್ರೀ ಶಿವಪ್ಪ ರವರು ವರದಿ ನೀಡಿದ್ದು, ನಂತರ ಈ ಮೇಲ್ಕಂಡ ಎಲ್ಲಾ ವಾಹನಗಳ ಮಾಲೀಕರ ಪತ್ತೆಗಾಗಿ ಬೆಂಗಳೂರು ನಗರದ ಎಲ್ಲಾ ಠಾಣೆಗಳಿಗೆ ಸರ್ಕುಲೇಶನ್ ಕಳುಹಿಸಿದ್ದು, ವಾರಸುದಾರರು ಪತ್ತೆಯಾಗಿರುವುದಿಲ್ಲ.

**ಅಮಾನತು ವಸ್ತುಗಳ ವಿವರ:**

1. **ಮೊ.ಸಂ. 360/02:** ಪಿ.ಎಫ್. ನಂ: 113/02 = ಒಂದು ಅಶೋಕ ಲೈಲಾಂಡ್ ಲಾರಿ ನಂ: ಕೆಎಲ್-13 ಹೆಚ್-9232, ಒಂದು ಟಾಟಾ ಲಾರಿ ನಂಬರ್ ಇಲ್ಲಾ.
2. **ಮೊ.ಸಂ. 321/02:** ಪಿ.ಎಫ್. ನಂ: 91/03 = ಒಂದು ಒಪಲಾ ಕೋರ್ಸಾ ಕಾರ್ ನಂ: ಕೆಎ-03 ಎಂ.ಎ-8119.
3. **ಮೊ.ಸಂ. 112/03:** ಪಿ.ಎಫ್. ನಂ: 41/03 = ಆಟೋರಿಕ್ಷಾ ಕೆಎಲ್-12 ಎ-8109
   ಪಿ.ಎಫ್. ನಂ: 42/03 = ಆಟೋರಿಕ್ಷಾ ಕೆಎಲ್-10 ಇ-3407
   ಪಿ.ಎಫ್. ನಂ: 43/03 = ಆಟೋರಿಕ್ಷಾ ಕೆಎಲ್-12 ಎ-339
   ಪಿ.ಎಫ್. ನಂ: 46/03 = ಆಟೋರಿಕ್ಷಾ ಕೆಎಲ್-12 ಎ-5208
   ಪಿ.ಎಫ್. ನಂ: 47/03 = ಆಟೋರಿಕ್ಷಾ ಕೆಎಲ್-8 ಕ್ಯೂ-1776.

**ಹಾಗೂ ಠಾಣಾ ಸಿಮಿಸ್ ಸಂಖ್ಯೆ:**

1. 318/04 = ಒಂದು ಕಪ್ಪು ಬಣ್ಣದ ಮೋಟಾರ್ ಸೈಕಲ್ ನಂ: ಕೆಎ-05 ಇ-9600
2. 319/04 = ಒಂದು ಆಕ್ಟಿವ್ ಹೋಂಡಾ ನಂ: ಕೆಎ-02 ವೈ-8931
3. 321/04 = ಒಂದು ಸುಜುಕಿ ಮೋಟಾರ್ ಸೈಕಲ್ ನಂ: ಕೆಎ-05 ವೈ-25
4. 332/04 = ಒಂದು ಆಟೋರಿಕ್ಷಾ ನಂ: ಕೆಎ-03 ಎ-6452.

ಪೊಲೀಸ್ ಇನ್ಸ್‌ಪೆಕ್ಟರ್,
ಪಿ.ಆರ್. 1770 ಕುಮಾರಸ್ವಾಮಿ ಲೇಔಟ್ ಪೊಲೀಸ್ ಠಾಣೆ, ಬೆಂಗಳೂರು.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ

**ವಿಷಯ :** ಸಮಾಪನೆಗೊಂಡಿರುವ ಹೊನ್ನಾಳಿ ಟೌನ್ ಗೃಹ ನಿರ್ಮಾಣ ಸಹಕಾರ ಸಂಘ ನಿ, ಹೊನ್ನಾಳಿ ಇವರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1) ಸಂಘದ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಎಸ್:ಎಲ್‌ಕ್ಯೂಡಿ:96:96-97, ದಿನಾಂಕ: 30.11.1996.
2) ಸಹಕಾರ ಅಭಿವೃದ್ಧಿ ಅಧಿಕಾರಿ ಹೊನ್ನಾಳಿ ಇವರ ಪ್ರಸ್ತಾವನೆ ಪತ್ರ ದಿನಾಂಕ: 01.10.2005.

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ ಈ ಮೇಲ್ಕಂಡ ಸಹಕಾರ ಸಂಘವು ಸಂಖ್ಯೆ: 527:47-48 ದಿನಾಂಕ: 12.11.1947 ರಲ್ಲಿ ನೋಂದಣಿ ಆಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಹೊನ್ನಾಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳ ವಿಲೇ ಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2) ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಂಘದ ಸಮಾಪನಾಧಿಕಾರಿಗಳು ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ ಹೊನ್ನಾಳಿ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್:ಡಿವಿಜಿ:ಸಿಆರ್-96/1996-97, ದಿನಾಂಕ: 26ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು, ಕೆ.ಎಂ. ಆಶಾ ಕೆ.ಸಿ.ಎಸ್, ಆದ ನಾನು ಸಮಾಪನೆಗೊಂಡ ಹೊನ್ನಾಳಿ ಟೌನ್ ಗೃಹ ನಿರ್ಮಾಣ ಸಹಕಾರ ಸಂಘ ನಿ, ಹೊನ್ನಾಳಿ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತದೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎಸ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಲಾಗಿದೆ.

ನನ್ನ ಸ್ವಹಸ್ತ ಸಹಿ ಮತ್ತು ಈ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 26.10.2005 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 1772 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ

**ವಿಷಯ :** ಸ್ಥಗಿತಗೊಂಡ ಬಾಪೂಜಿ (ಗೋಂದಾಳಿ) ತಾಮ್ರ ಅಲ್ಯೂನಿಯಂ ಹಾಗೂ ಗ್ರಾಮೋದ್ಯೋಗ ಕೈಗಾರಿಕಾ ಸಹಕಾರ ಸಂಘ ನಿ, ಅಮರಾವತಿ, ಹರಿಹರ ತಾಲ್ಲೂಕು ಇದನ್ನು ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1) ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರು ಸಲ್ಲಿಸಿರುವ ಪ್ರಸ್ತಾವನೆ ಪತ್ರ ದಿನಾಂಕ: 03.11.2004.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಪತ್ರ ದಿನಾಂಕ: 27.07.2005.
3) ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರ ಪತ್ರ ದಿನಾಂಕ: 21.10.2005.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಸ್ಥಗಿತಗೊಂಡಿರುವ ಬಾಪೂಜಿ (ಗೋಂದಾಳಿ) ತಾಮ್ರ ಅಲ್ಯೂಮಿನಿಯಂ ಹಾಗೂ ಗ್ರಾಮೋದ್ಯೋಗ ಕೈಗಾರಿಕಾ ಸಹಕಾರ ಸಂಘ ನಿ, ಅಮರಾವತಿ, ಹರಿಹರ ತಾಲ್ಲೂಕು ಇವರನ್ನು ಈಗಾಗಲೇ ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್:ಡಿವಿಜಿ:ಸಮಾಪನೆ:12-38:98-99, ದಿನಾಂಕ: 29.09.98 ರಲ್ಲಿ ಸಮಾಪನೆಗೊಳಿಸಿದ್ದು, ಸಂಘದ ಸದಸ್ಯರ ಕೋರಿಕೆ ಮೇರೆಗೆ ಸಂಘವನ್ನು ದಿನಾಂಕ: 22.11.2001 ರಂದು ಪುನಃಶ್ಚೇತನಕ್ಕಾಗಿ ಆದೇಶ ಹೊರಡಿಸಲಾಗಿದೆ. ಆದರೆ ಇದುವರೆಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವಲ್ಲಿ ಸಂಘದ ಆಡಳಿತ ಮಂಡಳಿ ನಿರ್ದೇಶಕರು, ಸದಸ್ಯರು ಹಾಗೂ ಸಾರ್ವಜನಿಕರು ವಿಫಲರಾಗಿರುತ್ತಾರೆ. ಸಂಘದ ಆಡಳಿತ ಮಂಡಳಿ ನಿರ್ದೇಶಕರುಗಳ ವಿಳಾಸದ ಮಾಹಿತಿ ಲಭ್ಯವಿಲ್ಲದ ಕಾರಣ ಕೇಳಿ ನೋಟೀಸ್‌ಗಳನ್ನು ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಸದಸ್ಯರಿಗೂ ಹಾಗೂ ಸಾರ್ವಜನಿಕರಿಗೂ ಆಸಕ್ತಿ ಇರುವುದಿಲ್ಲವೆಂದು ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರು ಉಲ್ಲೇಖ-3 ರಲ್ಲಿ ವರದಿ ಮಾಡಿರುತ್ತಾರೆ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್:ಡಿವಿಜಿ:ಸಮಾಪನೆ:ಸಿಆರ್-26/2004-05, ದಿನಾಂಕ: 25ನೇ ಅಕ್ಟೋಬರ್ 2005**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲೆ ಸಹಕಾರ ಸಂಘಗಳ ಉಪ ನಿಬಂಧಕರು ಕೆ.ಎಂ. ಆಶಾ,ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಸ್ಥಗಿತಗೊಂಡಿರುವ ಬಾಪೂಜಿ (ಗೋಂದಾಳಿ) ತಾಮ್ರ ಅಲ್ಯೂಮಿನಿಯಂ ಉತ್ಪಾದನೆ ಮತ್ತು ಮಾರಾಟ ಪರಿವರ್ತನಾ ಕೈಗಾರಿಕಾ ಸಹಕಾರ ಸಂಘ ನಿ, ಹರಿಹರ ಇದನ್ನು ಸಮಾಪನೆಗೊಳಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ ದಿನಾಂಕ: 25.10.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 1773 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ರವರ ನ್ಯಾಯಾಲಯಾದಲ್ಲಿ

**ದಾವಾ ಸಂಖ್ಯೆ: ಜೆಆರ್‌ಬಿ : 1462 : 2005-06**

**ವಾದಿ** ವಿರುದ್ಧ **ಪ್ರತಿವಾದಿಗಳು:**

ಶ್ರೀ ಎಸ್. ಸತ್ಯನಾರಾಯಣ ಮೂರ್ತಿ,
ಬಿನ್ ಎಲ್.ಶ್ರೀಕಂಠಯ್ಯ
ವಯಸ್ಸು ಸುಮಾರು 65 ವರ್ಷಗಳು
ವಾಸ : ನಂ. 380, 16ನೇ ಅಡ್ಡರಸ್ತೆ,
ಸರಸ್ವತಿ ನಗರ, ವಿಜಯನಗರ ಪಶ್ಚಿಮ,
ಬೆಂಗಳೂರು-560040

1) ಕೆ. ಗುರುರಾಜ್ ಬಿನ್ ಲೇಟ್ ಕೃಷ್ಣಮೂರ್ತಿ ಸಿ.
ಮನೋನ್ಮಯಿ ಸೊಸೈಟಿಯ ಮಾಜಿ ಅಧ್ಯಕ್ಷೆ.
2) ನರಸಿಂಹಮೂರ್ತಿ, ಬಿನ್ ರಾಮಾಚಾರ್
ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು
3) ಶ್ರೀ ಮತಿ ಪದ್ಮಾವತಿ ಬಿನ್ ಶ್ರೀನಿವಾಸ ಮೂರ್ತಿ
ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು
4) ಶ್ರೀಮತಿ ಮಾಲತಿಬಾಯಿ ಕೋಂ ಲೇಟ್ ಕೃಷ್ಣೋಜಿ ರಾವ್
ಮನೋನ್ಮಯಿ ಸೊಸೈಟಿಯ, ಮಾಜಿ ನಿರ್ದೇಶಕರು

**ಪ್ರತಿವಾದಿ 1 ರಿಂದ 4 ರವರ ವಾಸ:**
ನಂ. 40, 12ನೇ ಮೈನ್, 12ನೇ ಕ್ರಾಸ್, ಕಾಳಿದಾಸ ಲೇಔಟ್,
ಶ್ರೀನಗರ, ಬೆಂಗಳೂರು -50

5) ವಾಸುದೇವ ಭಟ್, ಬಿನ್ ಶ್ರೀನಿವಾಸ್ ಭಟ್
ಮನೋನ್ಮಯಿ ಸೊಸೈಟಿಯ, ಮಾಜಿ ನಿರ್ದೇಶಕರು.
6) ವಿಷ್ಣುಮೂರ್ತಿ, ಬಿನ್ ಶ್ರೀನಿವಾಸ ಭಟ್
ಮನೋನ್ಮಯಿ ಸೊಸೈಟಿಯ ಮಾಜಿ ಅಧ್ಯಕ್ಷರು
7) ಶ್ರೀಮತಿ ಅನುಪಮ, ಕೋಂ ವಿಷ್ಣುಮೂರ್ತಿ ಭಟ್
ಮನೋನ್ಮಯಿ ಸೊಸೈಟಿಯ ಮಾಜಿ ಅಧ್ಯಕ್ಷರು.

**ಪ್ರತಿವಾದಿ 5 ರಿಂದ 7 ರ ವರೆಗೆ ವಾಸ:**
ನಂ. 44, ಎಲ್.ಐ.ಜಿ. 8ನೇ ಕ್ರಾಸ್, ಕೆಂಗೇರಿ ಉಪನಗರ ಬೆಂಗಳೂರು- 60

8) ಶ್ರೀಮತಿ ಸಂದ್ಯಾ ಕೆ.ರಾವ್ ಕೋಂ ಕೆ. ಗುರುರಾಜ್
ಮನೋನ್ಮಯಿಸೊಸೈಟಿಯ ಮಾಜಿ ನಿರ್ದೇಶಕರು

9) ಕೆ. ತಿರುಮಲೇಶ್. ಬಿನ್ ಕೃಷ್ಣೋಜಿ. ರಾವ್
ಮನೋನ್ಮಯಿ ಸಂಸ್ಥೆಯ ಮಾಜಿ ನಿರ್ದೇಶಕರು
**ಪ್ರತಿವಾದಿ ಉ8 ಮತ್ತು 9 ವಾಸ:**
ನಂ. 40, 12ನೇ ಮೈನ್, 12ನೇ ಕ್ರಾಸ್, ರಾಘವೇಂದ್ರ ದೇವಾಸ್ಥಾನದ ಹಿಂದೆ
ಕಾಳಿದಾಸ ಲೇಔಟ್, ಶ್ರೀನಗರ, ಬೆಂಗಳೂರು-50

10) ಕೆ. ಎಸ್.ಸುಬ್ರಮಣ್ಯ ಬಿನ್ ಸತ್ಯನಾರಾಯಣ
ಮಾಜಿ ಕಾರ್ಯದರ್ಶಿ, ಮನೋನ್ಮಯಿ ಸೊಸೈಟಿ, ವಾಸ ನಂ. 1048,
19ನೇ 'ಎ' ರಸ್ತೆ ಹೆಚ್.ಬಿ.ಆರ್.ಲೇಔಟ್, ನಾಗವಾರ, ಬೆಂಗಳೂರು -45.

1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ರ ಪ್ರಕಾರ ಸ್ಥಿರ ಆಸ್ತಿಯನ್ನು ಅಟ್ಯಾಚ್ ಬಗ್ಗೆ ನೋಟೀಸ್:

ವಾದಿಯು 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70ರ ಅನ್ವಯ ಈ ನ್ಯಾಯಾಲಯದಲ್ಲಿ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ. 1,75,000-00 ಗಳನ್ನು ದಿನಾಂಕ: 4-7-2003 ರಿಂದ ಸಾಲಿಯಾನ ಶೇಕಡಾ 18 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯು ದಾವಾ ಅರ್ಜಿಯನ್ನು ಮೇಲ್ಕಂಡ ಸಂಖ್ಯೆಯಲ್ಲಿ ನೋದಾಯಿಸಿಕೊಂಡು ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ದಾವಾ ಅರ್ಜಿಯ ಜೊತೆ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 103 ಅನ್ವಯ ಅಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳು 1, 8 ಮತ್ತು 9 ಇವರುಗಳ ಹೆಸರಿನಲ್ಲಿರುವ ಈ ಕೆಳಗಿನ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ಮಾಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿ 8 ಮತ್ತು 9 ಅವರ ಹೆಸರಿನಲ್ಲಿ ಈಗಾಗಲೇ ಅರ್ಜಿಯಲ್ಲಿ ತೋರಿಸಿರುವಂತೆ ಆಸ್ತಿಗಳು ಇರುವುದು ಕಂಡು ಬಂದಿರುತ್ತದೆ. ಸದರಿ 'ಎ' ಮತ್ತು 'ಬಿ' ಷೆಡ್ಯೂಲ್ ಆಸ್ತಿಗಳನ್ನು ಸಂಘದ ಹಣದಿಂದ ಹೊಂದಿರುವುದಾಗಿ ತಿಳಿದು ಬಂದಿರುತ್ತದೆ. ಸಿ. ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಯಾದ ಕಟ್ಟಡವು ಕಾಳಿದಾಸ ಲೇಔಟ್‌ನಲ್ಲಿದ್ದು, ಈ ಸ್ಥಿರಾಸ್ತಿಯನ್ನು ಕೊಳ್ಳಲು ಮನೋನ್ಮಯಿ ಸೊಸೈಟಿಯ ಹಣವನ್ನು ಉಪಯೋಗಿಸಿರುವುದು ಅರ್ಜಿದಾರರ ಪ್ರಮಾಣಪತ್ರದಿಂದ ಕಂಡು ಬಂದಿರುತ್ತದೆ. ಇದಲ್ಲದೆ, ಈ ಸದರಿ ಆಸ್ತಿಯ ಮಾಲೀಕರಾದ ರಾಘವೇಂದ್ರ ರಾವ್, ಇದೇ ಆಸ್ತಿಯ ಮೇಲೆ ಆಧಾರವಾಗಿಟ್ಟು ಸೊಸೈಟಿಯಿಂದ ಸಾಲ ಪಡೆದುಕೊಂಡಿರುವುದು ಈ ಪ್ರಮಾಣಪತ್ರದಿಂದ ತಿಳಿದು ಬಂದಿರುತ್ತದೆ. ಆದ್ದರಿಂದ ಈ 'ಸಿ' ಷೆಡ್ಯೂಲು ಆಸ್ತಿ ಕೂಡಾ ಮೊದಲನೇ ಪ್ರತಿವಾದಿ ಹೆಸರಿನಲ್ಲಿ ಮಾರಾಟದ ಒಪ್ಪಂದದ ಕರಾರು ಆಗಿರುವುದಾಗಿ ತಿಳಿದು ಬಂದಿರುತ್ತದೆ. ಪ್ರತಿವಾದಿಗಳಾದ 1, 8 ಮತ್ತು 9 ರವರುಗಳ ಹೆಸರಿನಲ್ಲಿರುವ ಕೆಳಕಂಡ 'ಎ' ಬಿ' ಮತ್ತು 'ಸಿ' ಸೊತ್ತುಗಳನ್ನು ಪರಬಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಡಿಕ್ರಿ ನೀಡಿದ್ದರೂ, ಸದರಿ ಅವಾರ್ಡ್: ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ಕಲಂ 103 ರ ರೀತ್ಯ ಸಲ್ಲಿಸಿರುವ ಅರ್ಜಿಗಳನ್ನು ಮತ್ತು ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103 ರ ಅರ್ಜಿಯಲ್ಲಿ ತಿಳಿಸಿರುವ ವಿಷಯಗಳು ಮೇಲ್ನೋಟಕ್ಕೇ ನಿಜವೆಂದು ಕಂಡು ಬರುತ್ತದೆ. ಅಲ್ಲದೆ ಪ್ರತಿವಾದಿಗಳ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ 'ಎ' 'ಬಿ' ಸಿ' ಸ್ವತ್ತುಗಳನ್ನು ಮಾರಾಟ ಮಾಡದಂತೆ ತಡೆಯದಿದ್ದಲ್ಲಿ ವಾದಿ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ : ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಈ ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ತಿಳಿಸಿರುವ ಹಿನ್ನೆಲೆಯಲ್ಲಿ ಹಾಗೂ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ರ ಹಾಗೂ ಸರ್ಕಾರದ ಅಧಿಸೂಚನೆಯ ಕ್ರಮಸಂಖ್ಯೆ ಸಿಎಂಡಬ್ಲ್ಯು : 69: ಸಿಎಲ್‌ಎಂ: 2001 ದಿನಾಂಕ 21-11-2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ಆದ ನಾನು ಪ್ರತಿವಾದಿಗಳಾದ 1,8 ಮತ್ತು 9 ರವರುಗಳ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ಗಳಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿ ವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 1,75,000-00 ಗಳನ್ನು ಈ ನ್ಯಾಯಾಲಯದಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 11.11.05 ರಂದು ಬೆಳಗ್ಗೆ 11.00 ಗಂಟೆಯೊಳಗಾಗಿ ಅಧಿಕೃತ ಚಲನೆ : ರಶೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದ ನಿಗದಿತ ದಿನಾಂಕದೊಳಗೆ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಖರೀಧಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟು ಆದೇಶವೂ ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**8ನೇ ಪ್ರತಿವಾದಿಗೆ ಸೇರಿದ ಷೆಡ್ಯೂಲ್ ಸ್ವತ್ತಿನ ವಿವರ : - "ಎ" ಷೆಡ್ಯೂಲು**

1) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಕಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ ಎಫ್ ಕೋಡು (ಪಿ.ಪಿ. 12) ಖುಷ್ಕಿ ಒಂದು ಎಕರೆ ಮತ್ತು ಇದೇ ಸರ್ವೆ ನಂ.52ನೇ ಹೆಚ್ ಕೋಡು (ಪಿ.ಪಿ.14) ಖುಷ್ಕಿ 4 ಎಕರೆ ಎರಡು ತಾಕು ಜಮೀನು ಒಟ್ಟು 5 ಎಕರೆ ಖುಷ್ಕಿ ಜಮೀನಿಗೆ ಚಕ್ಕುಬಂದಿ:-

ಪೂರ್ವಕ್ಕೆ : ಶ್ರೀಮತಿ ಸಂಧ್ಯಾರವರ ಸದರಿ ಸರ್ವೆ ನಂಬರಿನ ಜಮೀನು

ಪಶ್ಚಿಮಕ್ಕೆ : ಸದರಿ ಸರ್ವೆ ನಂಬರಿನಲ್ಲಿರುವ ಖರೀದಿದಾರರಾದ ತಿರುಮಲ್ಲೇಶರವರಜಮೀನು

ಉತ್ತರಕ್ಕೆ : ಸರ್ಕಾರಿ ತೊರೆ ಹಳ್ಳ ಮತ್ತು

ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡ

2) ತುಮಾಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ. 52ನೇ ಕೋಡು(ಪಿ. ಪಿ.8) ಖುಷಿ ಒಂದು ಎಕರೆ ಜಮೀನಿಗೆ ಚಕ್ಕುಬಂದಿ:-

ಪೂರ್ವಕ್ಕೆ : ಶ್ರೀ ವೆಂಕಟಪ್ಪನವರ ಜಮೀನು

ಪಶ್ಚಿಮಕ್ಕೆ : ಶ್ರೀ ಮುನಿಸ್ವಾಮಯ್ಯನವರ ಜಮೀನು.

ಉತ್ತರ : ರಸ್ತೆ, ಮತ್ತು

ದಕ್ಷಿಣಕ್ಕೆ : ಖರೀದಿದಾರರಾದ ಶ್ರೀ ತಿರುಮಲ್ಲೇಶರವರ ಜಮೀನು.

3) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ. 52ನೇ (ಪಿ.ಪಿ.11) ಎಂ.ಆರ್. 38:2003-04 ರಲ್ಲಿ ಮಾರಾಟಗಾರರ ಹೆಸರಿಗೆ ಖಾತೆಯಾಗಿರತಕ್ಕ ಖಾತೆ ನಂ.2 ಎಂದು ನಂಬರಾಗಿರತಕ್ಕ ಖುಷ್ಕಿ 20 ಗುಂಟೆ ಜಮೀನಿನ ಸ್ಥಿರ ಜಮೀನಿಗೆ ಚಕ್ಕುಬಂದಿ : -

ಪೂರ್ವಕ್ಕೆ : ನಿಮ್ಮ ಸ್ವಂತ ಜಮೀನು

ಪಶ್ಚಿಮಕ್ಕೆ : ನಿಮ್ಮ ಸ್ವಂತ ಜಮೀನು

ಉತ್ತರಕ್ಕೆ : ದಾಸರ ರಾಮಯ್ಯನ ಜಮೀನು

ದಕ್ಷಿಣಕ್ಕೆ : ಸ್ವಂತ ಜಮೀನು

4) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ. 52ನೇ 7ನೇ ಕೋಡು (ಪಿ.ಪಿ.11) ಖುಷ್ಕಿ ಸುಮಾರು 20 ಗುಂಟೆ ಜಮೀನಿನ ಸ್ಥಿರ ಜಮೀನಿಗೆ ಚಕ್ಕುಬಂದಿ : -

ಪೂರ್ವಕ್ಕೆ : ನಿಮ್ಮ ಸ್ವಂತ ಜಮೀನು

ಪಶ್ಚಿಮಕ್ಕೆ : ನಂಜಯ್ಯನ ಜಮೀನು

ಉತ್ತರಕ್ಕೆ : ದಾಸರ ರಾಮಯ್ಯನ ಜಮೀನು

ದಕ್ಷಿಣಕ್ಕೆ : ನಿಮ್ಮ ಸ್ವಂತ ಜಮೀನು.

5) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ. 52ನೇ ಜೆ (ಪಿ.ಪಿ.13) ರಲ್ಲಿ ಇರತಕ್ಕ 4 ಎಕರೆ ಜಮೀನಿನಲ್ಲಿ ಪಶ್ಚಿಮ ಭಾಗಕ್ಕೆ 2-00 ( ಎರಡು ಎಕರೆ) ಖುಷ್ಕೆ ಜಮೀನಿಗೆ ಚಕ್ಕುಬಂದಿ :

ಪೂರ್ವಕ್ಕೆ : ಇದೇ ಸರ್ವೆನಂಬರಿನಲ್ಲಿ ಶ್ರೀಮತಿ ಸಂಧ್ಯಾರವರಿಗೆ ಕ್ರಯ ಮಾಡಿರುವ ಆಸ್ತಿ

ಪಶ್ಚಿಮಕ್ಕೆ : ಮುನಿಸ್ವಾಮಯ್ಯನವರ ಜಮೀನು

ಉತ್ತರಕ್ಕೆ : ಇದೇ ಸರ್ವೆನಂಬರಿನಲ್ಲಿ ಕೆ.ಎಸ್.ಮಂಜುನಾಥ್ ಉಳಿಸಿಕೊಂಡಿರುವ ಜಮೀನು

ದಕ್ಷಿಣಕ್ಕೆ : ರಂಗಹಸ್ವಾಮಿ ಗುಡ್ಡಕಾವಲಿ.

**9ನೇ ಪ್ರತಿವಾದಿಗೆ ಸೇರಿದ ಷೆಡ್ಯೂಲು ಸ್ವತ್ತಿನ ವಿವರ : 'ಬಿ' ಷೆಡ್ಯೂಲು**

1) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ (ಪಿ.ಪಿ.18) ರಲ್ಲಿ ಇರತಕ್ಕ 4 ಎಕರೆ ಜಮೀನಿನಲ್ಲಿ ಪಶ್ಚಿಮ ಭಾಗ 2 00 (ಎರಡು ಎಕರೆ) ಖುಷ್ಕಿ ಜಮೀನಿಗೆ ಚಕ್ಕುಬಂದಿ :

ಪೂರ್ವಕ್ಕೆ : ಕೆ. ಎಸ್. ಪ್ರಭಾಕರ್ ರವರ ಜಮೀನು

ಪಶ್ಚಿಮಕ್ಕೆ : ಇದೇ ಸರ್ವೆನಂಬರಿನಲ್ಲಿ ಶ್ರೀ ತಿರುಮಲ್ಲೇಶ್‌ರವರಿಗೆ ಕ್ರಯಮಾಡಿರುವ ಆಸ್ತಿ

ಉತ್ತರಕ್ಕೆ : ಇದೇ ಸರ್ವೆನಂಬರಿನಲ್ಲಿ ಕೆ. ಎಸ್. ಮಂಜುನಾಥ್ ಉಳಿಸಿಕೊಂಡಿರುವ ಜಮೀನು

ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡಕಾವಲ್.

2) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52 ನೇ ಇ ಕೋಡು ಖುಷ್ಕಿ 3-00 ಎಕರೆ ಮತ್ತು ಇದೇ ಸರ್ವೆ ನಂ. 52 ನೇ ಎಫ್ ಕೋಡು ಖುಷ್ಕಿ 3-00 ಎಕರೆ ತಾಕು ಜಮೀನು ಹಾಲಿ ಪಿ.ಪಿ.11 ಮತ್ತು ಪಿ.ಪಿ. 12ನೇ ಫೋಡು ನಂಬರುಗಳಾಗಿರತಕ್ಕ ಒಟ್ಟು 6-00 ಎಕರೆ ಖುಷ್ಕಿ ಜಮೀನಿನಲ್ಲಿ 3-00 ಎಕರೆ ತೆಂಗು ಮತ್ತು ಉಳಿಕೆ 3-00 ಎಕರೆ ಖುಷ್ಕಿ ಜಮೀನಿನಲ್ಲಿ ತೆಂಗು ಇರುವುದಿಲ್ಲ ಸದರಿ ಜಮೀನಿಗೆ ಚಕ್ಕುಬಂದಿ :

ಪೂರ್ವಕ್ಕೆ : ವೆಂಕಟಯ್ಯ ಮತ್ತು ಬೋರಯ್ಯನವರ ಜಮೀನು

ಪಶ್ಚಿಮಕ್ಕೆ : ಸದರಿ ಸರ್ವೆನಂಬರಿನ ಮಾಲಿಕರಾದ ವಿಜಯಮ್ಮನವರಿಂದ ಶ್ರೀ ತಿರುಮಲ್ಲೇಶ್ವರವರಿಗೆ ಕ್ರಯದ ಕರಾರು ಮಾಡಿಕೊಂಡಿರುವ ಜಮೀನು

ಉತ್ತರಕ್ಕೆ : ಸರ್ಕಾರಿ ತೊರೆಹಳ್ಳ

ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡ ಕಾವಲ್

**1ನೇ ಪ್ರತಿವಾದಿಗೆ ಸೇರಿದ ಷೆಡ್ಯೂಲು ಸ್ವತ್ತಿನ ವಿವರ :- 'ಸಿ' ಷೆಡ್ಯೂಲು**

ಮನೋನ್ಮಯಿ ಕ್ರೆಡಿಟ್ ಸೊಸೈಟಿಗೆ ಒಪ್ಪಂದದ ಮೂಲಕ ಮಾರಾಟವಾಗಿ ಮೊದಲನೇ ಪ್ರತಿವಾದಿಯ ಹೆಸರಿನಲ್ಲಿ ಒಪ್ಪಂದದ ಕರಾರು ಆಗಿರುವ ಸ್ವತ್ತು ಬೆಂಗಳೂರು ನಗರ, ಬೆಂಗಳೂರು-650 050, ಶ್ರೀನಗರ, ಕಾಳಿದಾಸಬಡಾವಣೆಯ 3ನೇ ಅಡ್ಡ ರಸ್ತೆ, 1ನೇ ಮುಖ್ಯರಸ್ತೆ, ನಂ. 68 ರಲ್ಲಿರುವ ಕಟ್ಟಿದ ಮನೆ ವಿಸ್ತೀರ್ಣ 37X28 ಅಡಿಗಳು ಅಳತೆಯಿರುತ್ತದೆ. ಈ ಸ್ವತ್ತು 'ಸಿ' ಷೆಡ್ಯೂಲ್‌ಗೆ ಸೇರಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ 30-9-05 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ವಿಭಾಗ, ಬೆಂಗಳೂರು.

ಪಿ.ಆರ್. 1783

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ

**ವಿಷಯ :** ಸಮಾಪನೆಗೊಂಡಿರುವ ಮಲ್ಲಿಕಾರ್ಜುನ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಲಕ್ಷ್ಮೀಸಾಗರ ಚೆನ್ನಗಿರಿ ತಾಲ್ಲೂಕು ಇವರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1) ಸಂಘದ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಎಸ್:ಎಲ್‌ಕ್ಯೂಡಿ:ಸಿಆರ್ 3018:83-84, ದಿನಾಂಕ: 25.9.1984.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರ ಪತ್ರ ದಿನಾಂಕ: 7.10.2005.
3) ಸಮಾಪನಾಧಿಕಾರಿಗಳು ಹಾಗೂ ಸ ಅ ಆ ಚೆನ್ನಗಿರಿ ಇವರ ಪ್ರಸ್ತಾವನೆ ನಂ. ಸಅಆ:ಚೆನ್ನಗಿರಿ:ಸಮಾ:05-06, ದಿನಾಂಕ: 28.9.2005.

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಸಂಖ್ಯೆ: 13081 ದಿನಾಂಕ: 2.9.1963 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (2)ರಲ್ಲಿ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಚೆನ್ನಗಿರಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳ ವಿಲೇ ಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು, ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರ ಮೂಲಕ, ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ ಸಂಖ್ಯೆ: ಡಿಆರ್:ಡಿವಿಜಿ:ಸಮಾಪನೆ:3:2003-04, ದಿನಾಂಕ: 17ನೇ ಅಕ್ಟೋಬರ್ 2005

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರಿ ಕ್ರಮಾಂಕ: ಸಿಎಂಡಬ್ಲ್ಯೂ:ಸಿಎಲ್‌ಎಂ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು, ಕೆ.ಎಂ. ಆಶಾ ಕೆ.ಸಿ.ಎಸ್, ಆದ ನಾನು ಸಮಾಪನೆಗೊಂಡ ಮಲ್ಲಿಕಾರ್ಜುನ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಲಕ್ಷ್ಮೀಸಾಗರ, ಚೆನ್ನಗಿರಿ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತದೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 23(ಎಸ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಹಾಗೂ ಈ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 17.10.2005 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 1774 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ

**ವಿಷಯ :** ಸಮಾಪನೆಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ, ಗೌರಿಹಳ್ಳಿ, ಹರಪನಹಳ್ಳಿ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರಡಿಯಲ್ಲಿ ಪುನಃಶ್ಚೇತನಗೊಳಿಸಲು ಆದೇಶಿಸುವ ಕುರಿತು.

**ಉಲ್ಲೇಖ :**
1) ಈ ಕಛೇರಿ ಆದೇಶ ಸಮ ಸಂಖ್ಯೆ ದಿನಾಂಕ: 29.07.2005.
2) ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರ ಪತ್ರ ದಿನಾಂಕ: 29.09.2005.
3) ಈ ಕಛೇರಿಯಲ್ಲಿ ದಿನಾಂಕ: 20.10.2005 ರಂದು ಜರುಗಿದ ಸಮಾಪನಾಧಿಕಾರಿಗಳ ಸಭೆ.

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಈ ಕಛೇರಿಯ ಆದೇಶದ ಪ್ರಕಾರ ಇದನ್ನು ಸಮಾಪನಗೊಳಿಸಲಾಗಿತ್ತು. ಉಲ್ಲೇಖ 2ರ ಪತ್ರದಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರು ಸದರಿ ಸಂಘವನ್ನು ಪುನಃಶ್ಚೇತನಗೊಳಿಸಲು ಸಂಘದ ಸದಸ್ಯರು ಜಿಲ್ಲಾ ವ್ಯವಸ್ಥಾಪಕರು ಪ್ರಾದೇಶಿಕ ಎಣ್ಣೆ ಬೀಜ ಬೆಳೆಗಾರರ ಸಹಕಾರ ಒಕ್ಕೂಟ ನಿ, ಚಿತ್ರದುರ್ಗ ಇವರನ್ನು ಕೋರಿರುವ ಮೇರೆಗೆ ಸದರಿ ಅಧಿಕಾರಿಗಳು ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಕೋರಿರುವ ಕಾರಣ ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿರುತ್ತಾರೆ. ದಿನಾಂಕ: 20.10.2005 ರಂದು ಈ ಕಛೇರಿಯಲ್ಲಿ ಜರುಗಿದ ಸಮಾಪನಾಧಿಕಾರಿಗಳ ಸಭೆಯಲ್ಲಿ ಸದರಿ ಸಂಘವನ್ನು ಪುನಃಶ್ಚೇತನಕ್ಕೆ ಆದೇಶ ಹೊರಡಿಸುವುದು ಸೂಕ್ತವೆಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಅಭಿಪ್ರಾಯ ಪಟ್ಟಿರುತ್ತಾರೆ. ಆದ ಪ್ರಯುಕ್ತ ಸಂಘವನ್ನು ಕಾರ್ಯ ಪ್ರವರ್ತವನ್ನಾಗಿ ಮಾಡಲು ಸಂಘದ ಸದಸ್ಯರು ಶ್ರಮಿಸಬೇಕೆಂಬ ನಿಬಂಧನೆಗೆ ಒಳಪಟ್ಟು ಉಲ್ಲೇಖ-1ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಸದರ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅನುಮತಿಯನ್ನು ನೀಡಲು ಉದ್ದೇಶಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ ಸಂಖ್ಯೆ: ಡಿಆರ್:ಡಿವಿಜಿ:ಸಮಾಪನೆ:ಸಿಆರ್-30:2004-05, ದಿನಾಂಕ: 25ನೇ ಅಕ್ಟೋಬರ್ 2005

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು, ಕೆ.ಎಂ. ಆಶಾ, ಕೆ.ಸಿ.ಎಸ್. ಆದ ನಾನು ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ, ಗೌರಿಹಳ್ಳಿ, ಹರಪನಹಳ್ಳಿ ತಾಲ್ಲೂಕು, ಇದರ ಉಲ್ಲೇಖ-1 ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಗೊಳಿಸಲಿಕ್ಕಾಗಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗಳಿಗೆ ಸೂಚಿಸಿದೆ ಹಾಗೂ ನೂತನ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ರಚಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಲಾಗಿದೆ. ಈ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 25.10.2005 ರಂದು ನನ್ನ ಸ್ವಹಸ್ತ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

ಪಿ.ಆರ್. 1775 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನಡವಳಿಕೆಗಳು

**ವಿಷಯ :** ಸ್ಥಗಿತಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ; ಬರಗೂರು, ಶಿರಾ ತಾಲ್ಲೂಕು ಈ ಸಂಘವನ್ನು ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಪತ್ರ ಸಂಖ್ಯೆ: ಸನಿ-33: ಎಂಕೆಟಿ:ಸ್ಥಗಿತ ಸ.ಸಂ:2004-05, ದಿನಾಂಕ: 25.11.2004 ಮತ್ತು 3.9.2005.

2) ಈ ಕಛೇರಿ ಸಮಸಂಖ್ಯೆ ಪತ್ರ ದಿನಾಂಕ: 24.8.2005.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ, ಬರಗೂರು, ಶಿರಾ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸುವಂತೆ ಕೋರಿ ಉಲ್ಲೇಖಿತ (1)ರ ಪತ್ರಗಳಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರು ಪ್ರಸ್ತಾವನೆ ಸಲ್ಲಿಸಿ ಸಂಘವನ್ನು ಸಮಾಪನೆಗೊಳಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಂಘವು 1998-99ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 28.5.1999 ರಂದು ನಡೆಸಿದ್ದು ನಂತರದ ಅವಧಿಯಲ್ಲಿ ಸಂಘವು ಯಾವುದೇ ವ್ಯವಹಾರವನ್ನು ನಡೆಸದೆ ಸ್ಥಗಿತಗೊಂಡಿರುತ್ತದೆ. ಹಾಗೂ ದಿನಾಂಕ: 28.5.1999 ರಂದು ಅಸ್ತಿತ್ವಕ್ಕೆ ಬಂದ ಸಂಘದ ಆಡಳಿತ ಮಂಡಳಿಯ ಅವಧಿಯು 1998-99 ರಿಂದ 2003-04ನೇ ಸಾಲಿನವರೆಗೆ ಆಡಳಿತ ಮಂಡಳಿಯ ಅವಧಿ ಇದ್ದ ಬಗ್ಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ವರದಿ ಮಾಡಿರುತ್ತಾರೆ.

ಮೇಲಿನ ಕಂಡಿಕೆ (1) ರಲ್ಲಿ ಅಂಶಗಳ ಹಿನ್ನೆಲೆಯಲ್ಲಿ ಸಂಘವು ಕಳೆದ 6 ವರ್ಷಗಳಿಂದ ಸ್ಥಗಿತಗೊಂಡಿದ್ದು ಸಂಘದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಉಪಯೋಗಗಳು ದೊರೆಯದೆ ಸ್ಥಗಿತಗೊಂಡಿರುತ್ತದೆ. ಹಾಗೂ ಸಂಘದ ಆಡಳಿತ ಮಂಡಳಿ ಅವಧಿಯು ಪೂರ್ಣಗೊಂಡಿದ್ದು ನೂತನ ಆಡಳಿತ ಮಂಡಳಿ ರಚನೆಯಾಗದೆ ಇರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಸಮಾಪನೆಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

### ಆದೇಶ ಸಂಖ್ಯೆ: ಡಿಆರ್‌ಬಿ:ಡಿಎಲ್‌ಎಸ್:39:2004-05, ದಿನಾಂಕ: 9ನೇ ನವೆಂಬರ್ 2005

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2) (ಬಿ) ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎಲ್. ನರಸಿಂಹಮೂರ್ತಿ, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಸ್ಥಗಿತಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ; ಬರಗೂರು, ಶಿರಾ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಶಿರಾ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಕೂಡಲೇ ಸಂಘದ ಪ್ರಭಾರ ಪಡೆದು ಸಂಘದ ಆಸ್ತಿ ಜವಾಬ್ದಾರಿ ಅನ್ವಯ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಆದ್ಯತಾ ಪಟ್ಟಿಗೆ ಅನುಮೋದನೆ ಪಡೆದುಕೊಂಡು ಆಸ್ತಿ ಜವಾಬ್ದಾರಿಗಳನ್ನು ಕಾಯಿದೆ ಮತ್ತು ನಿಯಮಾನುಸಾರ ಶೀಘ್ರವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವು ಕೂಡಲೇ ಬರುತ್ತದೆ. ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 09.11.2005 ರಂದು ಹೊರಡಿಸಿದೆ.

ಪಿ.ಆರ್. 1776 ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯರವರ ಕಛೇರಿ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

### ಸಂಖ್ಯೆ: ಎಲ್.ಎನ್.ಡಿ.(ಎ) ಸಿಆರ್-122/2002-03, ದಿನಾಂಕ: 3ನೇ ಸೆಪ್ಟೆಂಬರ್ 2005

**ವಿಷಯ :** ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಎಸ್. ಬಿಂಗೀಪುರ ಗ್ರಾಮದ ಸ.ನಂ.179 ರಲ್ಲಿ ಆನೇಕಲ್ ಪುರಸಭೆ ಹಾಗೂ ಬೊಮ್ಮನಹಳ್ಳಿ ನಗರಸಭೆಗೆ ಒಟ್ಟು 47-00 ಎಕರೆ ಜಮೀನನ್ನು ನಗರ ಸ್ಥಳೀಯ ಸಂಸ್ಥೆಗಳ ಘನ ತ್ಯಾಜ್ಯ ವಸ್ತುಗಳ ವಿಲೇವಾರಿಗೆ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ :** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ.2004:ಎಲ್‌ಜಿಕ್ಯೂ:2005, ದಿನಾಂಕ: 23.3.2005.

2) ಆಯುಕ್ತರು, ನಗರಸಭೆ ಬೊಮ್ಮನಹಳ್ಳಿ, ಬೆಂಗಳೂರು ಇವರ ಅ.ಸ.ಪತ್ರದ ಸಂಖ್ಯೆ: ಬೊನಸ:ಆಶಾ:118/2004-05, ದಿನಾಂಕ: 21.10.2004.

3) ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ, ಬೆಂಗಳೂರು ಇವರ ಪತ್ರದ ಸಂಖ್ಯೆ: ಎಲ್.ಎನ್.ಡಿ: ಸಿಆರ್:105/2003-04, ದಿನಾಂಕ: 21.9.2004.

ವಿಷಯಕ್ಕೆ ಸಂಬಂಧಿಸಿದಂತೆ, ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಎಸ್. ಬಿಂಗೀಪುರ ಗ್ರಾಮದ ಸ.ನಂ.179 ರಲ್ಲಿ ಆನೇಕಲ್ ಪುರಸಭೆ ಹಾಗೂ ಬೊಮ್ಮನಹಳ್ಳಿ ನಗರಸಭೆಗೆ ತಲಾ 35-00 ಎಕರೆ ಜಮೀನನ್ನು ನಗರ ಸ್ಥಳೀಯ ಸಂಸ್ಥೆಗಳಿಗೆ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಹಿನ್ನಲೆಯಲ್ಲಿ ಘನ ತ್ಯಾಜ್ಯ ವಸ್ತುಗಳ ವಿಲೇವಾರಿಗಾಗಿ ಸರ್ಕಾರಿ ಜಮೀನನ್ನು ಒದಗಿಸಲು ಅನಿವಾರ್ಯತೆ

ಉಂಟಾಗಿರುವುದರಿಂದ ಉಲ್ಲೇಖ (1)ರ ಸರ್ಕಾರದ ಪತ್ರದ ನಿರ್ದೇಶನದಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿಯಲ್ಲಿ ನಿರ್ದಿಷ್ಟ ಉದ್ದೇಶಕ್ಕಾಗಿ ಸರ್ಕಾರಿ ಜಮೀನನ್ನು ಕಾಯ್ದಿರಿಸಲು ಜಿಲ್ಲಾಧಿಕಾರಿಗಳಿಗೆ ಅಧಿಕಾರವಿರುವುದನ್ನು ಬಳಸಿ ಸದರಿ ಜಾಗವನ್ನು ಸಂಬಂಧಿಸಿದ ಸ್ಥಳೀಯ ಸಂಸ್ಥೆಗಳಿಗೆ ವರ್ಗಾಯಿಸುವಂತೆ ಸರ್ಕಾರದ ಪೂರ್ವಾನುಮತಿ ನೀಡಲಾಗಿದೆ.

ಆದ್ದರಿಂದ ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಎಸ್. ಬಿಂಗೀಪುರ ಗ್ರಾಮದ ಸ.ನಂ.179 ರಲ್ಲಿ 47-06 ಎಕರೆ ವಿಸ್ತೀರ್ಣ ಮಾತ್ರ ಖಾಲಿಯಿದ್ದು, ಖಾಲಿಯಿರುವ ಸರ್ಕಾರಿ ಗೋಮಾಳ ಜಮೀನಿನಲ್ಲಿ ಆನೇಕಲ್ ಪುರಸಭೆಗೆ 27-00 ಎಕರೆ ಹಾಗೂ ಬೊಮ್ಮನಹಳ್ಳಿ ನಗರಸಭೆಗೆ 20-06 ಎಕರೆಯಂತೆ ಒಟ್ಟು 47-06 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿಯಲ್ಲಿ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಘನ ತ್ಯಾಜ್ಯ ವಸ್ತುಗಳ ವಿಲೇವಾರಿಗೆ ಹಾಗೂ ಶೇಖರಣೆಗಾಗಿ ಕಾಯ್ದಿರಿಸಲಾಗಿದೆ.

**ಷರತ್ತುಗಳು:**

1) ಆನೇಕಲ್ ಪುರಸಭೆ ಹಾಗೂ ಬೊಮ್ಮನಹಹಳ್ಳಿ ನಗರಸಭೆಗೆ ಇವರಿಗೆ ಪ್ರಶ್ನಿತ ಜಮೀನಿನ ಮೇಲೆ ಯಾವುದೇ ಹಕ್ಕು ಇರುವುದಿಲ್ಲ.
2) ಸದರಿ ಜಮೀನಿನ ಉಸ್ತುವಾರಿಯನ್ನು ತಹಶೀಲ್ದಾರರ ಮೇಲ್ವಿಚಾರಣೆಯಲ್ಲಿ ನಿರ್ವಹಿಸತಕ್ಕದ್ದು.

ಪಿ.ಆರ್. 1777 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾವೇರಿ ಜಿಲ್ಲೆ, ಹಾವೇರಿ

**ಪ್ರಕರಣ ಸಂಖ್ಯೆ: ಡಬ್ಲ್ಯೂ.ಸಿ.ಎ:ಎಫ್-106:2005/480, ದಿನಾಂಕ: 9ನೇ ನವೆಂಬರ್ 2005**

**ಅರ್ಜಿದಾರರು :**

1) ಶ್ರೀ ನಾನಪ್ಪ ಬಿನ್ ಮಲ್ಲಪ್ಪ
ತರತನವರ R/o ಕುಡುಪಲಿ ಗ್ರಾಮ, ತಾ: ಹಿರೆಕೆರೂರ
2) ಶ್ರೀಮತಿ ಗೌರವ್ವ ಎನ್., ತರತನವರ

**ಪ್ರತಿವಾದಿಗಳು:**

1) ಶ್ರೀ ಎನ್. ನಾಗರಾಜ ಬಿನ್ ನರಸಿಂಹರಾಜ
Prap M/s ಬೆಂಗಳೂರು ಕೆಮಿಕಲ್ಸ್ ಕಾರ್ಪೋರೇಷನ್
ನಂ.22/ಎ, 2ನೇ ಸ್ಟೇಜ್, ಗಾರೆಪಾಳ್ಯ ಹತ್ತಿರ,
ಕುಂಬಳಗೊಡು ಇಂಡಸ್ಟ್ರೀಯಲ್ ಏರಿಯಾ, ಬೆಂಗಳೂರು.

**ಪ್ರಕಟಣೆ**

ಶ್ರೀ ನಾಗಪ್ಪ ಬಿನ್ ಮಲ್ಲಪ್ಪ ತರತನವರ R/o ಕುಡುಪಲಿ ಗ್ರಾಮ, ತಾ: ಹಿರೆಕೆರೂರ (2) ಶ್ರೀಮತಿ ಗೌರಮ್ಮ ಇವರುಗಳಾದ ತಾವು ಮೃತ ಗಿರೀಶ್ ಬಿನ್ ನಾಗಪ್ಪ ತರತನವರ ಇವರ ತಂದೆ ಮತ್ತು ತಾಯಿ ಎಂದೂ ಇವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಗಿರೀಶ ಎನ್. ತರತನವರ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಎನ್. ನಾಗರಾಜ ಬಿನ್ ನರಸಿಂಹರಾಜ ಇವರ ಫ್ಯಾಕ್ಟರಿ ಯಲ್ಲಿ ಹೆಲ್ಪರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್. ವಿಜಯಕುಮಾರ್**
ಪಿ.ಆರ್. 1778 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾವೇರಿ ಜಿಲ್ಲೆ, ಹಾವೇರಿ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾವೇರಿ ಜಿಲ್ಲೆ, ಹಾವೇರಿ

**ಪ್ರಕರಣ ಸಂಖ್ಯೆ: ಡಬ್ಲ್ಯೂ.ಸಿ.ಎ:ಎಫ್-109:2005/481, ದಿನಾಂಕ: 9ನೇ ನವೆಂಬರ್ 2005**

**ಅರ್ಜಿದಾರರು :**

1) ಶ್ರೀಮತಿ ನಾಗವ್ವ ಕೋಂ ಬಸವಣ್ಣೆಪ್ಪ ಗುಣಗಾಸೂರ
R/o ಇನಾಮ ನೀರಲಗಿ

**ಪ್ರತಿವಾದಿಗಳು:**

1) ಶಿವಾನಂದ ಬಿನ್ ಬಸವಣ್ಣೆಪ್ಪ ಗುನಗಾಸೂರ
R/o ಇನಾಮ ನೀರಲಗಿ T.T. Unit ಮಾಲೀಕರು.
2) United India Ins. Co. Ltd., ಹುಬ್ಬಳ್ಳಿ.

**ಪ್ರಕಟಣೆ**

ಶ್ರೀಮತಿ ನಾಗವ್ವ ಕೋಂ ಬಸವಣ್ಣೆಪ್ಪ ಗುಣಗಾಸೂರ R/o ಇನಾಮ ನೀರಲಗಿ ಇವರುಗಳಾದ ತಾವು ಮೃತ ರವಿಚಂದ್ರ ಬಿನ್ ಬಸವಣ್ಣೆಪ್ಪ ಗುಣಗಾಸೂರ ಇವರ ತಾಯಿ ಎಂದೂ ಇವರ ಸಾವಿಗಾರಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರವಿಚಂದ್ರ ಗುಣಗಾಸೂರ ಇವರು ಒಂದನೇ ಪ್ರತಿವಾದಿಗಳಾದ ಶಿವಾನಂದ ಬಿನ್ ಬಸವಣ್ಣೆಪ್ಪ ಗುನಗಾಸೂರ ಇವರ T.T. Unit ರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್. ವಿಜಯಕುಮಾರ್**
ಪಿ.ಆರ್. 1779 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾವೇರಿ ಜಿಲ್ಲೆ, ಹಾವೇರಿ.

## ಸಹಕಾರ ಇಲಾಖೆ

## ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡವಳಿಕೆ

**ವಿಷಯ :** ಸಮಾಪನಾ ಆದೇಶಿತ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ, ಶಿವಮೊಗ್ಗ ಇದರ ನೋಂದಣಿ ರದ್ಧತಿ-ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ರವರ ಆದೇಶ ನಂ:ಡಿಆರ್‌ಎಸ್:ಕಾನೂನು-3: ಡಿಎಲ್‌ಎಸ್:29:97-98:ದಿನಾಂಕ: 31.10.97.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ಸಂಖ್ಯೆ: ಎಆರ್-24:ಸಮಾಪನೆ:ಸಿಆರ್-22: 2005-06, ದಿನಾಂಕ: 10.10.2005.

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ, ಈ ಸಂಘವು ಸಹಕಾರ ಸಂಘಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ, ರವರ ಕಾರ್ಯಾಲಯದ ಸಂಖ್ಯೆ: ಎಆರ್‌ಎಸ್:ಎಂಕೆಟಿ:ಹೆಚ್‌ಬಿಸಿಎಸ್:10264: 84-85, ದಿನಾಂಕ: 28.5.1985 ರಲ್ಲಿ ನೋಂದಣಿಯಾಗಿದ್ದು, ಕಾರ್ಯವ್ಯಾಪ್ತಿಯು ತಾಲ್ಲೂಕುಮಟ್ಟಕ್ಕಿಂತ ಕಡಿಮೆ ಇರುತ್ತದೆ. ಈ ಸಹಕಾರ ಸಂಘವು ತನ್ನ ಕಾರ್ಯವನ್ನು ಸ್ಥಗಿತಗೊಳಿಸಿರುವುದರಿಂದ ಉಲ್ಲೇಖ (1) ರಲ್ಲಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿ, ಶ್ರೀ ಎ.ಆರ್. ಶಶಿಧರ್, ಮುಖ್ಯ ಗುಮಾಸ್ತರು, ಸಿ.ಸಿ.ಸಿ., ಡಿಸಿಸಿ ಬ್ಯಾಂಕ್ ನಿ., ಶಿವಮೊಗ್ಗ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕಗೊಳಿಸಿದ್ದು, ಸಮಾಪನಾಧಿಕಾರಿಯವರು ದಿನಾಂಕ: 7.2.1998 ರಲ್ಲಿ ಪ್ರಭಾರ ವಹಿಸಿಕೊಂಡಿರುತ್ತಾರೆ. ಸಮಾಪನಾಧಿಕಾರಿಯವರ, ಈ ಸಂಘದ ಆಸ್ತಿ ಮತ್ತು ಜವಾಬ್ದಾರಿ ಸಂಬಂಧ ಆದ್ಯತಾಪಟ್ಟಿ ತಯಾರಿಸಿ ಅನುಮೋದನೆ ಪಡೆದಂತೆ, ಆಸ್ತಿ ಸಂಗ್ರಹಣೆ ಮಾಡಿ, ಜವಾಬ್ದಾರಿ ವಿಲೇವಾರಿ ಮಾಡಿರುತ್ತಾರೆ. ಈ ಸಂಘದ ಲೆಕ್ಕಪತ್ರಗಳನ್ನು ದಿನಾಂಕ: 31.3.2004 ರವರೆಗೆ ಆಡಿಟ್ ಮಾಡಿಸಿದ್ದು ದಿನಾಂಕ: 1.4.2004 ರಿಂದ 30.9.2005 ರವರೆಗೆ ಆಸ್ತಿ ಜವಾಬ್ದಾರಿ ತಯಾರಿಸಿ ಸಲ್ಲಿಸಿರುತ್ತಾರೆ. ಈ ಆಸ್ತಿ ಜವಾಬ್ದಾರಿ ತಃಖ್ತೆಯನ್ವಯ, ಆಸ್ತಿ-ಜವಾಬ್ದಾರಿ ಶೂನ್ಯಗೊಳಿಸಿದ್ದು, ದಿನಾಂಕ: 1.10.2005 ರಂದು ಸಭೆ ನಡೆಸಿ, ನೋಂದಣಿ ರದ್ದತಿಗಾಗಿ ತೀರ್ಮಾನಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಷೇರು, ಸರ್ಕಾರದ ಸಾಲ ಏನೂ ಇರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಈ ಸಂಘದಲ್ಲಿ ಚರಾಸ್ತಿ ಮತ್ತು ಸ್ಥಿರಾಸ್ತಿ ಏನೂ ಇಲ್ಲವೆಂದು ತಿಳಿಸಿರುತ್ತಾರೆ. ಈ ಸಂಘದಲ್ಲಿ ಆಸ್ತಿ-ಜವಾಬ್ದಾರಿ ಶೂನ್ಯಗೊಳಿಸಿದ ನಂತರ ಡಿಸಿಸಿ ಬ್ಯಾಂಕ್‌ನಲ್ಲಿ ಉಳಿತಾಯ ಖಾತೆಯಲ್ಲಿ ರೂ.44004-00 ಗಳಿದ್ದು, ಸಮಾಪನಾ ಸಹಕಾರ ಸಂಘಗಳ ಸಹಕಾರ ಅಭಿವೃದ್ಧಿ ಟ್ರಸ್ಟ್‌ಗೆ ವರ್ಗಾಯಿಸಲು ನಿರ್ಣಯಿಸಿರುತ್ತಾರೆ. ಸಮಾಪನಾಧಿಕಾರಿಗಳ ನಿರ್ಣಯ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ, ರವರ ಶಿಫಾರಸ್ ಆಧಾರಿತವಾಗಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:92:2002-03/1288, ದಿನಾಂಕ: 27ನೇ ಅಕ್ಟೋಬರ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ: 2000, ದಿನಾಂಕ: 21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾಲ್ಲೂಕು, ಇದರ ನೋಂದಣಿ ನಂ: ಡಿಆರ್‌ಎಸ್:ಎಂಕೆಟಿ:ಹೆಚ್‌ಬಿಸಿಎಸ್:10264:84-85, ದಿನಾಂಕ: 28.5.1985ನ್ನು ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಸಂಘದ ಹೆಸರಿನಲ್ಲಿಯ ಉಳಿತಾಯ ಖಾತೆ ಎಸ್.ಬಿ.ಎ.ಎಲ್. ನಂ.46ಎಲ್‌ಎಲ್‌ಎಫ್ 10/17 ರಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಶಿವಮೊಗ್ಗ, ಇದರ ನಗರ ಶಾಖೆಯಲ್ಲಿರುವ ರೂ.44004-15 ಗಳನ್ನು ಅಪೆಕ್ಸ್ ಬ್ಯಾಂಕ್, ಬೆಂಗಳೂರಿನಲ್ಲಿ ಸಹಕಾರ ಅಭಿವೃದ್ಧಿ ನಿಧಿ ಉಳಿತಾಯ ಖಾತೆ ನಂ.9368 ಈ ಖಾತೆಗೆ ವರ್ಗಾಯಿಸಲು ಆದೇಶಿಸಿದೆ. ಸಮಾಪನಾಧಿಕಾರಿಯವರು ಈ ಸಂಬಂಧ ಸೂಕ್ತ ಕ್ರಮವಿಟ್ಟು, ವರ್ಗಾಯಿಸಿದ ಬಗ್ಗೆ ವರದಿ ಸಲ್ಲಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 27ನೇ ಅಕ್ಟೋಬರ್ 2005 ರಂದು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. 1780 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಜಿಲ್ಲಾಧಿಕಾರಿಯವರ ಕಾರ್ಯಾಲಯ, ಕೊಡಗು ಜಿಲ್ಲೆ, ಕೊಡಗು

## ಅಧಿಕೃತ ಜ್ಞಾಪನಾ ಪತ್ರ

**ಸಂಖ್ಯೆ: ಇಎಸ್‌ಟಿ(2):40:2005-06, ದಿನಾಂಕ: 22ನೇ ಅಕ್ಟೋಬರ್ 2005**

**ವಿಷಯ :** ಜಿಲ್ಲಾ ಆಸ್ಪತ್ರೆ, ಮಡಿಕೇರಿ/ಸಾರ್ವಜನಿಕ ಆಸ್ಪತ್ರೆ ವೀರಾಜಪೇಟೆ/ಸಾರ್ವಜನಿಕ ಆಸ್ಪತ್ರೆ ಸೋಮವಾರಪೇಟೆಯಲ್ಲಿ ಖಾಲಿ ಇರುವ ತಜ್ಞ : ಸಾಮಾನ್ಯ ಕರ್ತವ್ಯ ವೈದ್ಯರ ಹುದ್ದೆಯನ್ನು ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ :** 1) ಸರ್ಕಾರದ ಅಧೀನ ಕಾರ್ಯದರ್ಶಿ ಆರೋಗ್ಯ ಮತ್ತು ಕು.ಕ. ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಕುಕ 627:ಹೆಚ್‌ಎಸ್‌ಹೆಚ್ 2004, ದಿನಾಂಕ: 09.02.2005.

2) ಸಂಖ್ಯೆ: ಹೆಚ್‌ಎಸ್‌ಡಬ್ಲ್ಯೂ 120 ಪ್ರಿನ್ಸಿಪಾಲ್ ಸೆಕ್ರೆಟರಿ 2005, ದಿನಾಂಕ: 15.07.2005.

3) ಈ ಕಛೇರಿ ಪತ್ರಿಕಾ ಪ್ರಕಟಣೆ ಸಂಖ್ಯೆ: ಇಎಸ್‌ಟಿ(2):40:05-06, ದಿನಾಂಕ: 12.08.2005.

ಉಲ್ಲೇಖ (1), (2)ರ ಆದೇಶದ ಪ್ರಕಾರ ಜಿಲ್ಲಾ ಆಸ್ಪತ್ರೆ, ಮಡಿಕೇರಿಯಲ್ಲಿ / ಸಾರ್ವಜನಿಕ ಆಸ್ಪತ್ರೆ ವೀರಾಜಪೇಟೆ / ಸಾರ್ವಜನಿಕ ಆಸ್ಪತ್ರೆ ಸೋಮವಾರಪೇಟೆಯಲ್ಲಿ ಖಾಲಿ ಇರುವ ತಜ್ಞ : ಸಾಮಾನ್ಯ ಕರ್ತವ್ಯ ವೈದ್ಯರ ಹುದ್ದೆಗೆ ಈ ಕೆಳಗೆ ನಮೂದಿಸಿದ ತಜ್ಞ : ಸಾಮಾನ್ಯ ಕರ್ತವ್ಯ ವೈದ್ಯರನ್ನು ಒಂದು ವರ್ಷದ ಅವಧಿಗೆ ಮುಂದಿನ ಆದೇಶದವರೆಗೆ ನೇರ ನೇಮಕಾತಿಯಿಂದ ತುಂಬುವವರೆಗೆ / ವರ್ಗಾವಣೆಯಿಂದ ತುಂಬುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ, ಗುತ್ತಿಗೆ ಆಧಾರದ ಮೇಲೆ ಹಾಗೂ ತಜ್ಞ ವೈದ್ಯರಿಗೆ ಮಾಸಿಕ ರೂ.13,000 (ಹದಿಮೂರು ಸಾವಿರ) ಹಾಗೂ

ಸಾಮಾನ್ಯ ಕರ್ತವ್ಯ ವೈದ್ಯರಿಗೆ ಮಾಸಿಕ ರೂ 11,000 (ಹನ್ನೊಂದು ಸಾವಿರ) ರಂತೆ ಅಭ್ಯರ್ಥಿಗಳನ್ನು ಆಯ್ಕೆಮಾಡಿ ಸರ್ಕಾರದ ಚಾಲ್ತಿ ನಿಯಮದ ಪ್ರಕಾರ ಹಾಗೂ ರೋಸ್ಟರ್ ಪದ್ಧತಿಯನ್ನು ಅಳವಡಿಸಿಕೊಂಡು ನೇಮಕಾತಿ ಮಾಡಲಾಗಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ಹುದ್ದೆಯ ಹೆಸರು ಮತ್ತು ನಿಯೋಜಿಸಿದ ಸ್ಥಳ |
|---|---|---|
| 1 | ಡಾ. ಗಿರಿಧರ್ ಬಿ.ವಿ.,<br>ದೇವಿರಮ್ಮ ನಿಲಯ, 58:41, 7ನೇ ಮೈನ್, 13ನೇ ಇ ಕ್ರಾಸ್, ಬೆಂಗಳೂರು-560 079. | ಕಿ.ವಿ, ಮೂಗು, ಗಂಟಲು ತಜ್ಞರು,<br>(ಇಎನ್‌ಟಿ) ಜಿಲ್ಲಾ ಆಸ್ಪತ್ರೆ, ಮಡಿಕೇರಿ |
| 2 | ಡಾ. ನಾರಾಯಣಸ್ವಾಮಿ,<br>ತಂದೆ ವೆಂಕಟಪ್ಪ, 2203:11ಎ, ಶಬರಿ ನಿಲಯ, ಬಂಬೂ ಬಜಾರ್, ಮೇದರ್ ಬ್ಲಾಕ್,<br>ಮೈಸೂರು-570 021 | ಸಾಮಾನ್ಯ ಕರ್ತವ್ಯ ವೈದ್ಯರು ಸಾರ್ವಜನಿಕ<br>ಆಸ್ಪತ್ರೆ, ವೀರಾಜಪೇಟೆ, ಕೊಡಗು. |
| 3 | ಡಾ. ಹಾಲಸ್ವಾಮಿ ಎಸ್.ಬಿ.,<br>ತಂದೆ: ಬರ್‍ಮಪ್ಪ ಸಿ.ಬಿ., ಸೋಕೆ ಅಂಚೆ, ಜಗಲೂರು ತಾಲ್ಲೂಕು, ದಾವಣಗೆರೆ. | ಸಾಮಾನ್ಯ ಕರ್ತವ್ಯ ವೈದ್ಯರು ಸಾರ್ವಜನಿಕ<br>ಆಸ್ಪತ್ರೆ, ವೀರಾಜಪೇಟೆ, ಕೊಡಗು. |
| 4 | ಡಾ. ಪ್ರಶಾಂತ್ ಸಿ.ಆರ್.,<br>ತಂದೆ: ರಾಮಚಂದ್ರ ಸಿ.ಬಿ., 937, ಇ ಅಂಡ್ ಎಫ್ ಬ್ಲಾಕ್, ಅಗ್ನಿಹಂಸ ರೋಡ್,<br>2ನೇ ಕ್ರಾಸ್, ಕುವೆಂಪುನಗರ, ಮೈಸೂರು-570 023. | ನೇತ್ರ ತಜ್ಞರು, ಜಿಲ್ಲಾ ಆಸ್ಪತ್ರೆ, ಮಡಿಕೇರಿ. |

**ಷರತ್ತುಗಳು:**

1) ಮೇಲೆ ನಮುದಿಸಿದ ವೈದ್ಯರು ತಮ್ಮಗೆ ನಮೂದಿಸಿದ ಸ್ಥಳದಲ್ಲಿ 7 ದಿವಸದ ಒಳಗೆ ಹಾಜರಾಗತಕ್ಕದ್ದು.
2) ಜಿಲ್ಲಾ ಶಸ್ತ್ರ ಚಿಕಿತ್ಸಕರು ಕರ್ತವ್ಯಕ್ಕೆ ತೆಗೆದುಕೊಳ್ಳುವ ಮುನ್ನ ಜಾತಿ ಪ್ರಮಾಣ ಪತ್ರ, ಜನನ ದೃಢೀಕರಣ ಪತ್ರ ಹಾಗೂ ಇನ್ನಿತರ ದಾಖಲಾತಿಗಳನ್ನು ಪರಿಶೀಲಿಸಿ ಕ್ರಮವಾಗಿದೆಯೇ ಎಂದು ಖಚಿತಪಡಿಸಿಕೊಂಡು ಕರ್ತವ್ಯಕ್ಕೆ ತೆಗೆದುಕೊಳ್ಳಲು ಸೂಚಿಸಿದೆ.
3) ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅಭ್ಯರ್ಥಿಗಳು ಇಬ್ಬರು ಗೌರವಾನಿತರ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರ ಮತ್ತು ಸರ್ಕಾರದ ಆದೇಶದಲ್ಲಿ ಹೇಳಿರುವ ನಿಬಂಧನೆ ಮತ್ತು ಷರತ್ತಿಗೊಳಪಟ್ಟು ಒಪ್ಪಿಕೊಂಡಿರುವ ರೂ.50/-ರ ಛಾಪಾಕಾಗದದ ಮೇಲೆ ಮುಚ್ಚಳಿಕೆಯನ್ನು ಸಕ್ಷಮ ಪ್ರಾಧಿಕಾರದಿಂದ ಪ್ರಮಾಣೀಕರಿಸಿ ಸಲ್ಲಿಸತಕ್ಕದ್ದು.
4) ಈ ಗುತ್ತಿಗೆ ಆಧಾರದ ಮೇಲೆ ನೇಮಕಾತಿಯಾದ ವೈದ್ಯರುಗಳು ಆರೋಗ್ಯ ಇಲಾಖೆಯಿಂದ / ಜಿಲ್ಲಾ ಶಸ್ತ್ರ ಚಿಕಿತ್ಸಕರು / ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರು ನಿಗದಿಪಡಿಸಿದ ವೈದ್ಯಾಧಿಕಾರಿಗಳ ಸೇವಾ ನಿಬಂಧನೆಗಳು ಮತ್ತು ಷರತ್ತುಗಳಿಗೆ ಬದ್ಧರಿರಬೇಕು.
5) ಕೇಂದ್ರ ಸ್ಥಾನದಲ್ಲಿ ವಾಸವಿದ್ದು, 24 ಗಂಟೆಗಳಲ್ಲೂ ಯಾವುದೇ ತುರ್ತು ಸೇವೆಗೆ / ರಾತ್ರಿ ಪಾಳೀಗೆ / ತುರ್ತು ವಿಭಾಗಗಳಲ್ಲಿ ಲಭ್ಯವಿರುವಂತೆ ಸೂಚಿಸಿದೆ.
6) ತಾತ್ಕಾಲಿಕ ಸರ್ಕಾರಿ ನೌಕರನಿಗೆ ಸಿಗುವಂತಹ ಎಲ್ಲಾ ವೈದ್ಯಕೀಯ ಸೌಲಭ್ಯ ಪಡೆಯಲು ಹಾಗೂ ದುರ್ನಡತೆಯಿಂದಾಗಿ ಸರ್ಕಾರಕ್ಕೆ ನಷ್ಟ ಉಂಟಾದಲ್ಲಿ ಅದನ್ನು ಸರ್ಕಾರಕ್ಕೆ ತುಂಬಿಕೊಡಲು ಒಪ್ಪಿರುತ್ತೇನೆ.
7) ಖಾಯಂ ನೇಮಕಾತಿಗಾಗಲೀ ವಿಶ್ರಾಂತಿ ವೇತನಕ್ಕಾಗಲೀ, ನಿವೃತ್ತಿ ಉಪದಾನಕ್ಕಾಗಲೀ, ವೇತನ ಶ್ರೇಣಿಗಾಗಲೀ ಅಥವಾ ಯಾವುದೇ ಭತ್ಯೆಗಳನ್ನು ಪಡೆಯುವ ಹಕ್ಕನ್ನು ಹೊಂದಿರುವುದಿಲ್ಲ.
8) ಈ ಸ್ಥಳಗಳಿಂದ ಇನ್ನೊಮ್ಮೆ ಬೇರೆ ಕಡೆಗೆ ವರ್ಗಾವಣೆಗೆ ಅವಕಾಶವಿರುವುದಿಲ್ಲ.

ಪಿ.ಆರ್. 1782 ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ.

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1 ಅಲಿ ಆಸ್ಕರ್ ರಸ್ತೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ: ಅನಿ(ಕೈ:ಇ):ಡಿಐಎಸ್:ಡಿ-2:817:2005-06**

**ಅರ್ಜಿದಾರರು:**

1) ವ್ಯವಸ್ಥಾಪಕ ನಿರ್ದೇಶಕರು,
ದಾವಣಗೆರೆ ಡಿಸಿಸಿ ಬ್ಯಾಂಕ್ ನಿ, ದಾವಣಗೆರೆ.
2) ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ, ಪಂಪಾ ಮಹಾಕವಿ ರಸ್ತೆ,
ಚಾಮರಾಜಪೇಟೆ, ಬೆಂಗಳೂರು.
3) ವ್ಯವಸ್ಥಾಪಕ ನಿರ್ದೇಶಕರು, ಚಿತ್ರದುರ್ಗ ಡಿಸಿಸಿ ಬ್ಯಾಂಕ್ ನಿ, ಚಿತ್ರದುರ್ಗ.
4) ವ್ಯವಸ್ಥಾಪಕ ನಿರ್ದೇಶಕರು, ಶಿವಮೊಗ್ಗ ಡಿಸಿಸಿ ಬ್ಯಾಂಕ್ ನಿ, ಶಿವಮೊಗ್ಗ.
5) ವ್ಯವಸ್ಥಾಪಕ ನಿರ್ದೇಶಕರು, ಬಳ್ಳಾರಿ ಡಿಸಿಸಿ ಬ್ಯಾಂಕ್ ನಿ., ಹೊಸಪೇಟೆ.

**ಎದುರು ಅರ್ಜಿದಾರರು:**

1) ವ್ಯವಸ್ಥಾಪಕ ನಿರ್ದೇಶಕರು,
ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ.
ದೊಡ್ಡಬಾತಿ, ದಾವಣಗೆರೆ ಜಿಲ್ಲೆ.

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ನೋಟೀಸ್**

ಮೇಲ್ಕಂಡ ಅರ್ಜಿದಾರರು, ಎದುರು ಅರ್ಜಿದಾರರ ವಿರುದ್ಧ ರೂ.25,18,64,250.00 ಗಳಿಗೆ ವ್ಯಾಜ್ಯ ಹೂಡಿರುತ್ತಾರೆ. ಈ ವ್ಯಾಜ್ಯದ ಅರ್ಜಿಯೊಂದಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ರೀತ್ಯಾ ಎದುರು ಅರ್ಜಿದಾರರು ವಶದಲ್ಲಿರುವ ಚರ ಮತ್ತು ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದ ಆದೇಶದ ಮುನ್ನಾ ಮುಟ್ಟುಗೋಲು ಹಾಕಿಕೊಳ್ಳಲು, ಈ ನ್ಯಾಯಾಲಯದಲ್ಲಿ ಮಧ್ಯಂತರ ಪರಿಹಾರ ಕೋರಿ ಅರ್ಜಿ ದಾಖಲು ಮಾಡಿರುತ್ತಾರೆ.

ಸದರಿ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗಿದೆ. ಈ ನೋಟೀಸಿಗೆ ಲಗತ್ತಿಸಿರುವ ಅನುಬಂಧದಲ್ಲಿ ವಿವರವಾಗಿ ತಿಳಿಸಿರುವಂತೆ ಚರ ಮತ್ತು ಸ್ಥಿರಾಸ್ತಿಗಳನ್ನು ಏಕೆ ಈ ನ್ಯಾಯಾಲಯವು ಅರ್ಜಿದಾರರ ಬೇಡಿಕೆ ಮೊತ್ತಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಆದೇಶವನ್ನು ಹೊರಡಿಸಬಾರದು ಎಂಬುದಕ್ಕೆ ಎದುರು ಅರ್ಜಿದಾರರಾದ ನೀವು, ಅರ್ಜಿದಾರರ ಬೇಡಿಕೆ ಮೊತ್ತಕ್ಕೆ ಸರಿಸಮಾನವಾಗಿ ಸೂಕ್ತ ಭದ್ರತೆಯನ್ನು ಈ ನ್ಯಾಯಾಲಯಕ್ಕೆ

ಒಪ್ಪಿಗೆಯಾಗುವಂತೆ ಈ ನೋಟೀಸ್ ಸ್ವೀಕರಿಸಿದ 15 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಈ ಬಗ್ಗೆ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ, ಲಭ್ಯವಿರುವ ಸಾಕ್ಷ್ಯಾಧಾರಗಳು ಮತ್ತು ಅರ್ಹತೆಯ ಅನುಸಾರ ಸೂಕ್ತ ಆದೇಶ ಹೊರಡಿಸಲಾಗುವುದೆಂದು ತಿಳಿಯುವುದು.

ಈ ನೋಟೀಸನ್ನು ದಿನಾಂಕ: 9.11.2005 ರಂದು ನನ್ನ ಸ್ವಸಹಿ ಮತ್ತು ಮೊಹರಿನೊಂದಿಗೆ ನೀಡಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

**ಅನುಬಂಧ**

**ಭದ್ರ ಸಹಕಾರ ಸಕ್ಕರೆ ಕಾರ್ಖಾನೆ ನಿ, ದೊಡ್ಡಬಾತಿ, ದಾವಣಗೆರೆ ಜಿಲ್ಲೆ ಈ ಕಾರ್ಖಾನೆಗೆ ಸೇರಿದ ಚರಸ್ಥಿರಾಸ್ತಿಗಳ ಪಟ್ಟಿ**

| ಕ್ರ. ಸಂ. | ಭೂಮಿಯ ಸರ್ವೇ ನಂಬರುಗಳು | ಭೂಮಿಯ ವಿಸ್ತೀರ್ಣ | | ಭೂಮಿಯ ಚೆಕ್ಕುಬಂದಿಗಳು | | | |
|---|---|---|---|---|---|---|---|
| | | ಎಕರೆ | ಗುಂಟೆ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| | | ಸ್ಥಿರಾಸ್ತಿಗಳು | | | | | |
| 1 | ನಂ. 228:2ಸಿಪಿ | 6 | 00 | ನೀಲನಹಳ್ಳಿ ಗ್ರಾಮ | ಭದ್ರಾ ನಾಲೆ | ಭದ್ರಾ ನಾಲೆ | ಖಾತಿ ಬೆಟ್ಟ |
| 2 | ನಂ. 228:2ಬಿ | 5 | 28 | | | | |
| 3 | ನಂ. 228:2ಎ | 4 | 25 | | | | |
| 4 | ನಂ. 227:ಪಿ1 | 9 | 37 | | | | |
| 5 | ನಂ. 303:ಪಿ1 | 40 | 00 | | | | |
| | ಕ್ರಮ ಸಂಖ್ಯೆ 1 ರಿಂದ 5 ರವರೆಗಿನ ಸರ್ವೆ ನಂ. ದೊಡ್ಡಬಾತಿ ಗ್ರಾಮ, ದಾವಣಗೆರೆ ಜಿಲ್ಲೆಗೆ ಸೇರಿದ್ದು | | | | | | |
| 6 | ನಂ. 26/1 ಪಿ2 | 4 | 00 | | | | |
| 7 | ನಂ. 30/2 | 7 | 15 | | | | |
| 8 | ನಂ. 33/ಪಿ2 | 2 | 00 | | | | |
| 9 | ನಂ. 35 | 13 | 25 | | | | |
| 10 | ನಂ. 37 | 17 | 02 | | | | |
| 11 | ನಂ. 38/1ಪಿ2 | 6 | 08 | | | | |
| 12 | ನಂ.43/ಪಿ5 ಕ್ರಮ ಸಂಖ್ಯೆ: 6 ರಿಂದ 12 ರವರೆಗಿನ ಸರ್ವೆ ನಂ. ನೀಲಹಳ್ಳಿಗ್ರಾಮ ಕಸಬಾ ಹೋಬಳಿ, ದಾವಣಗೆರೆ ತಾಲ್ಲೂಕಿಗೆ ಸೇರಿದ್ದು. | 2 | 28 | | | | |
| 13 | ನಂ. 11 ಅಗಸನಕಟ್ಟೆ ಗ್ರಾಮ, ಕಸಬಾ ಹೋಬಳಿ, ದಾವಣಗೆರೆ ಜಿಲ್ಲೆ. | 25 | 13 | ಭರ್ಮಪ್ಪ ವಕೀಲರು | ಲಾಡ್ವಾ ನಾರಾಯಣ | ಕುಲಕರ್ಣಿ ವಕೀಲರು | ಲಾಡ್ವಾ ನಾರಾಯಣ |

**ಚರಾಸ್ತಿಗಳು:**

| | |
|---|---|
| 1) | ಸಕ್ಕರೆ ಸಂಸ್ಕರಣ ಘಟಕದ ಸ್ಥಾವರ |
| 2) | ವರ್ಕ್ ಶಾಪ್ ಮೆಷಿನರಿ |
| 3) | ಬಾಯಿಲರ್ಸ್ ಮತ್ತು ಟ್ರ್ಯಾಫ್ರಾಕ್ಟರ್ಸ್ |
| 4) | ಅವೇರಿ ತೂಕದ ಯಂತ್ರ |
| 5) | ಗೋಬರ್ ಅನಿಲ ಸ್ಥಾವರ |
| 6) | ನಿರಂತರ ಸೆಂಟ್ರಿಫ್ಯೂಗ್ಸ್ |
| 7) | ಎಲ್ಲಾ ಪೀಠೋಪಕರಣಗಳು ಮೇಜು ಮತ್ತು ಕುರ್ಚಿಗಳು |
| 8) | ಗಣಕ ಯಂತ್ರ, ಪ್ರಿಂಟರ್ಸ್ ಮತ್ತು ಬೆರಳಚ್ಚು ಯಂತ್ರಗಳ |

ಪಿ.ಆರ್. 1784 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

**ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ) ಕೈಮಗ್ಗ ಮತ್ತು ಜವಳಿ ಇಲಾಖೆ ಇವರ ನಡವಳಿಗಳು**

**ಸಂಖ್ಯೆ: ಕೈಜಇ/ಜಂರಿ/ಜತ/ರಾ.ಸ.ನೂ.ಗಿ/ಸಮಾಪನೆ/118/2005-06, ದಿನಾಂಕ: 28ನೇ ಅಕ್ಟೋಬರ್ 2005**

**ವಿಷಯ :** ರಾಯಚೂರು ಸಹಕಾರಿ ನೂಲಿನ ಗಿರಣಿ ನಿ, ರಾಯಚೂರು ಇದನ್ನು ಸಮಾಪನೆಗೊಳಿಸಿ ಸಮಾಪಕರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಪತ್ರ ಸಂಖ್ಯೆ: ಕೈಜಇ/ಜಂರಿ/ಟಿ.2/6/2001-02, ದಿನಾಂಕ:13.8.2001, 9.10.2001 ಮತ್ತು 26.8.2002.

2) ಈ ಕಛೇರಿಯ ಪತ್ರ ಸಂಖ್ಯೆ: ಕೈಜಇ/ಜಂರಿ/ಜತ/ರಾಸನೂಗಿ/ಸಮಾಪನೆ/ ದಿನಾಂಕ: 29.8.2005.

3) ಸರ್ಕಾರದ ಪತ್ರ ಸಂಖ್ಯೆ: ಸಿಡಿ/41/ಸಿಐಎಂ/2005, ದಿನಾಂಕ: 25.10.2005.

**ಪ್ರಸ್ತಾವನೆ:**

ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಸಹಕಾರ ಕ್ಷೇತ್ರದಲ್ಲಿ ರಾಯಚೂರು ಸಹಕಾರಿ ನೂಲಿನ ಗಿರಣಿಯನ್ನು 3.3.1961 ರಲ್ಲಿ ಸಹಕಾರಿ ಕಾಯ್ದೆಯಡಿ ನೋಂದಾಯಿಸಿ 6000 ಸ್ಪಿಂಡಲ್ಸ್‌ಗಳೊಂದಿಗೆ ಸ್ಥಾಪಿಸಲಾಗಿದ್ದು, ಇದರ ಪ್ರಾರಂಭಿಕ ಯೋಜನಾ ವೆಚ್ಚ ರೂ.91.00 ಲಕ್ಷಗಳಾಗಿರುತ್ತದೆ. 1994-95 ರಲ್ಲಿ ವಿಸ್ತರಣ ಮತ್ತು ಆಧುನಿಕ ಯೋಜನೆಗಳಡಿ ಗಿರಣಿಯ ಉತ್ಪಾದನಾ ಸಾಮರ್ಥ್ಯವನ್ನು 18920 ಸ್ಪಿಂಡಲ್‌ಗಳಿಗೆ ಹೆಚ್ಚಿಸಿ ರೂ.477.00 ಲಕ್ಷಗಳ ಯೋಜನಾ ವೆಚ್ಚಕ್ಕೆ ಏರಿಸಲಾಯಿತು. ಗಿರಣಿಯಲ್ಲಿ ಒಟ್ಟು ಸಂದಾಯವಾದ ಷೇರು ಬಂಡವಾಳ ರೂ.411.48 ಲಕ್ಷಗಳಿದ್ದು, ಇದರಲ್ಲಿ ಸರ್ಕಾರದ ಷೇರು ಬಂಡವಾಳ ರೂ.376.80 ಲಕ್ಷಗಳು ಮತ್ತು ಸರ್ಕಾರದ ಸಾಲ ರೂ.391.65 ಲಕ್ಷಗಳು ಇರುತ್ತವೆ. ಗಿರಣಿಯು ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಂದ ರೂ.22.31 ಲಕ್ಷಗಳ ಸಹಾಯಧನವನ್ನು ಪಡೆದಿದ್ದು, 5 ಸಹಕಾರ ನೂಲಿನ ಗಿರಣಿಗಳಿಂದ ರೂ.10.75 ಲಕ್ಷಗಳ ಠೇವಣಿಯನ್ನು ಪಡೆದಿರುತ್ತದೆ. ರಾಯಚೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ಈ ಗಿರಣಿಗೆ ದುಡಿಯುವ ಬಂಡವಾಳವಾಗಿ ರೂ.8.75 ಲಕ್ಷಗಳನ್ನು ನೀಡಿರುತ್ತದೆ. ಗಿರಣಿಗೆ ಇಷ್ಟೆಲ್ಲಾ ಉತ್ತಮ ಮಟ್ಟದ ಹಣಕಾಸಿನ ಪೂರೈಕೆಯಾಗಿದ್ದರೂ ಅದು ಸಮರ್ಪಕವಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗಿರುವುದಿಲ್ಲ. ಅಲ್ಲದೆ ಗಿರಣಿಯು ಹತ್ತಿ ಖರೀದಿಸುವ ಬಾಬ್ತು, ಯಂತ್ರೋಪಕರಣಗಳ ಬಿಡಿ ಭಾಗಗಳು, ಬಡ್ಡಿ ಪಾವತಿಗಳು, ಸಹಕಾರಿ ನೂಲಿನ ಗಿರಣಿಗಳಿಗೆ ಕೊಡಬೇಕಾದ ಬಾಕಿ, ಆಡಿಟ್ ಫೀ ಮತ್ತು ನೌಕರರ ವೇತನ ಪಾವತಿ ಮುಂತಾದವುಗಳಿಗೆ ರೂ.323.84 ಲಕ್ಷಗಳ ಬಾಕಿ ಪಾವತಿ ಮಾಡಬೇಕಾಗಿರುತ್ತದೆ. ಗಿರಣಿಯಲ್ಲಿ ದುಡಿಯುವ ಬಂಡವಾಳದ ಕೊರತೆ ಇದ್ದುದರಿಂದ ಈ ಗಿರಣಿಯು ಪ್ರಾರಂಭದಿಂದಲೂ ಹಾನಿಯಲ್ಲಿಯೇ ನಡೆಯುತ್ತಿದ್ದದರ ಪರಿಣಾಮವಾಗಿ ಸಹಕಾರ ಸಂಘಗಳ ನಿಬಂಧಕರು ಈ ಗಿರಣಿಯ ಆಡಳಿತ ಮಂಡಳಿಯನ್ನು ರದ್ದಪಡಿಸಿ ದಿನಾಂಕ: 22.12.1975 ರಲ್ಲಿ ಆಡಳಿತಾಧಿಕಾರಿಯನ್ನು ನೇಮಿಸಿರುತ್ತಾರೆ. ಸರ್ಕಾರ ಈ ಗಿರಣಿಯನ್ನು ಪುನಶ್ಚೇತನಗೊಳಿಸುವ ದೃಷ್ಟಿಯಿಂದ ಗಿರಣಿಯನ್ನು ಗುತ್ತಿಗೆಯ ಆಧಾರದ ಮೇಲೆ ದಿನಾಂಕ: 1.5.1991 ರಿಂದ 31.12.1993 ರವರೆಗೆ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ, ಬೆಂಗಳೂರು ಇವರಿಗೆ ನೀಡಿದ್ದು, ಆ ಸಂಸ್ಥೆಯು ಈ ಗಿರಣಿಯ ಕೆಲಸ ಕಾರ್ಯಗಳನ್ನು ನಿಯಂತ್ರಿಸಿ ಮುಂದುವರೆಸಿಕೊಂಡು ಹೋಗಲು ವಿಫಲವಾಗಿರುತ್ತದೆ. ಈ ಸಂಸ್ಥೆಗೆ ನೌಕರರ ವೇತನ ಪಾವತಿಗೆ ಮತ್ತು ವಿದ್ಯುಚ್ಛಕ್ತಿ ಬಾಕಿ ಪಾವತಿಸುವ ಸಲುವಾಗಿ ರೂ.1.00 ಕೋಟಿ ಷೇರು ಬಂಡವಾಳ ಸಹಾಯವನ್ನು ಸಹ ಸರ್ಕಾರ ನೀಡಿತ್ತು. ಪುನಃ ನವೆಂಬರ್ 1994 ರಿಂದ ಅಕ್ಟೋಬರ್ 1996 ರವರೆಗೆ ಆಡಳಿತಾಧಿಕಾರಿಯು ಈ ಗಿರಣಿಯ ಆಡಳಿತವನ್ನು ವಹಿಸಿಕೊಂಡಿದ್ದರೂ ಸಹ ದುಡಿಯುವ ಬಂಡವಾಳದ ಕೊರತೆಯಿಂದಾಗಿ ಗಿರಣಿಯನ್ನು ನಡೆಸಲು ಸಾಧ್ಯವಾಗಲಿಲ್ಲ. ಮತ್ತೊಂದು ಪ್ರಯತ್ನದಲ್ಲಿ ಸರ್ಕಾರವು ದಿನಾಂಕ: 5.4.1994 ರಲ್ಲಿ ಟೆಂಡರ್ ಕರೆದಾಗ ಶ್ರೀ ಪರಸವ ಕಾಟನ್ ಟ್ರೇಡರ್ಸ್, ರಾಯಚೂರು ಇವರು ಗಿರಣಿಯನ್ನು ನಡೆಸಲು ಮುಂದೆ ಬಂದಿದ್ದರೂ ಸಹ ಗುತ್ತಿಗೆ ಕರಾರು ಅಂತಿಮ ರೂಪ ಪಡೆಯಲು ವಿಫಲವಾಗಿರುತ್ತದೆ. ಮತ್ತೊಮ್ಮೆ ಸದಸ್ಯರಿಂದ ಮತ್ತು ಗಂಗಾವತಿ/ರಾಯಚೂರು ಎ.ಪಿ.ಎಂ.ಸಿ. ಯವರಿಂದ ರೂ.27.00 ಲಕ್ಷ ಷೇರು ಬಂಡವಾಳವನ್ನು ಸಂಗ್ರಹಿಸಿ ಆಡಳಿತಾಧಿಕಾರಿಯವರು ಈ ಗಿರಣಿಯನ್ನು ಮಾರ್ಚ್ 1997 ರಿಂದ ಅಕ್ಟೋಬರ್ 1997 ರವರೆಗೆ ನಡೆಸಲು ಪ್ರಯತ್ನ ಮಾಡಿದ್ದರೂ ಸಹ ಅದು ಫಲಕಾರಿಯಾಗಿರುವುದಿಲ್ಲ. ಆ ನಂತರ ಸರ್ಕಾರವು ದಿನಾಂಕ: 29.10.1997 ರಂದು ಗಿರಣಿಯನ್ನು ನಡೆಸುವ ಸಲುವಾಗಿ ಸಾರ್ವಜನಿಕರಿಂದ ಟೆಂಡರ್ ಕರೆದಿರುತ್ತದೆ. ಆಗ ಶ್ರೀ ಅಂಜನೇಯ ಕಾಟನ್ ಮಿಲ್ಸ್, ದಾವಣಗೆರೆ ಎಂಬುವವರು ಗಿರಣಿಯನ್ನು ನಡೆಸಲು ಮುಂದೆ ಬಂದ್ದರೂ ಸಹ ಅದರ ಗುತ್ತಿಗೆ ಕರಾರು ವಿಫಲಾಗಿರುತ್ತದೆ.

ವಿಸ್ತರಣಾ ಯೋಜನೆಯಡಿಯಲ್ಲಿ ಈ ಗಿರಣಿಯು ರೂ.385.64 ಲಕ್ಷ ಅವಧಿ ಸಾಲವನ್ನು ಪಡೆಯಲು ಸರ್ಕಾರವು ಖಾತರಿ ನೀಡಿದ್ದರ ಪರಿಣಾಮವಾಗಿ ಹಾಗೂ ಗಿರಣಿಯು ಈ ಸಾಲವನ್ನು ಮರುಪಾವತಿ ಮಾಡಲು ಆಗದೇ ಇದ್ದುದರಿಂದ ಈ ಮೊತ್ತವನ್ನು 1999 ರಲ್ಲಿ ಮತ್ತು ಅನಂತರದಲ್ಲಿ ಓ.ಟಿ.ಎಸ್. ಯೋಜನೆಯಡಿಯಲ್ಲಿ ಸರ್ಕಾರವು ಮರುಪಾವತಿ ಮಾಡಿರುತ್ತದೆ. ಈ ಗಿರಣಿಯ ಯಂತ್ರೋಪಕರಣಗಳು ತುಂಬಾ ಹಳೆಯದಾಗಿದ್ದು ಈಗಿನ ಸ್ಥಿತಿಯಲ್ಲಿ ಅವುಗಳನ್ನು ಉಪಯೋಗಿಸಲು ಸಾಧ್ಯವಾಗುತ್ತಿಲ್ಲ. ಅಲ್ಲದೆ ಗಿರಣಿಯ ಕ್ಲಿಷ್ಟ ಆರ್ಥಿಕ ಪರಿಸ್ಥಿತಿಯಿಂದ ನವೀನ ತಂತ್ರಜ್ಞಾನವುಳ್ಳ ಯಂತ್ರೋಪಕರಣಗಳನ್ನು ಅಳವಡಿಸಲು ಸಾಧ್ಯವಾಗಿರುವುದಿಲ್ಲ. ಆದರೂ ಇತ್ತೀಚಿಗೆ ಈ ಗಿರಣಿಯನ್ನು ಪುನಶ್ಚೇತನಗೊಳಿಸುವ ಇನ್ನೊಂದು ಪ್ರಯತ್ನದಲ್ಲಿ ರಾಜ್ಯ ಸರ್ಕಾರವು ಇದಕ್ಕೆ ರೂ.25.00 ಲಕ್ಷಗಳ ಷೇರು ಬಂಡವಾಳವನ್ನು ನೀಡಿತ್ತು. ಆದರೆ ಗಿರಣಿಯು ಈ ಹಣವನ್ನು ವಿದ್ಯುಚ್ಛಕ್ತಿ ಪಾವತಿಗೆ, ನೌಕರರ ಭವಿಷ್ಯ ನಿಧಿ ಪಾವತಿಗೆ ರಾಜ್ಯ ಉಚ್ಚ ನ್ಯಾಯಾಲಯದ ನಿರ್ದೇಶನದಂತೆ ನೌಕರರ ವೇತನ ಮತ್ತು ಇತರ ಆಡಳಿತಾತ್ಮಕ ವೆಚ್ಚಗಳನ್ನು ಭರಿಸಲು ಈ ಹಣವನ್ನು ಖರ್ಚು ಮಾಡಿರುತ್ತದೆ.

ಗಿರಣಿಯಲ್ಲಿ 250 ಜನ ಖಾಯಂ ನೌಕರರು ಮತ್ತು 350 ಜನ ದಿನಗೂಲಿ ನೌಕರರು ಕೆಲಸ ಮಾಡುತ್ತಿದ್ದು ಗಿರಣಿಯು ದಿನಾಂಕ: 21.10.1997 ರಿಂದ ಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. 2001ನೇ ಸಾಲಿನಲ್ಲಿ ರಾಜ್ಯ ಸರ್ಕಾರವು ಟಾಟಾ ಎಕನಾಮಿಕ್ ಕನ್ಸಲ್‌ಟೆನ್ಸಿ ಸರ್ವಿಸಸ್, ಬೆಂಗಳೂರು ಇವರಿಂದ ಈ ಗಿರಣಿಯ ವಸ್ತು ಸ್ಥಿತಿಯನ್ನು ಹಾಗೂ ಪುನಶ್ಚೇತನದ ಅಧ್ಯಯನ ಮಾಡಿದ್ದು, ಈ ಸಂಸ್ಥೆಯು ನೀಡಿರುವ ವರದಿಯ ಪ್ರಕಾರ ಈ ಗಿರಣಿಯನ್ನು ಪುನಶ್ಚೇತನಗೊಳಿಸಲು ಯೋಗ್ಯವಲ್ಲವಾಗಿರುವುದರಿಂದ ಇದನ್ನು ಮುಚ್ಚುವಂತೆ ಶಿಫಾರಸ್ಸು ಮಾಡಿರುತ್ತಾರೆ. ಜವಳಿ ಅಭಿವೃದ್ಧಿ ಆಯುಕ್ತರು ಈ ವರದಿಯನ್ನು ಅಧ್ಯಯನ ಮಾಡಿ ಸದರಿ ಸಂಸ್ಥೆಯ ಶಿಫಾರಸ್ಸಿನ ಮೇರೆಗೆ ಈ ಗಿರಣಿಯನ್ನು ಸಮಾಪನೆಗೊಳಿಸಲು ಉಲ್ಲೇಖ ಪತ್ರಗಳಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಗಿರಣಿಯು ದಿನಾಂಕ: 31.3.2005ಕ್ಕೆ ಒಟ್ಟು ರೂ.11.62 ಕೋಟಿಗಳಷ್ಟು ಕೂಡೀಬಿದ್ದ ಹಾನಿಯನ್ನು ಹೊಂದಿರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 77 (2) ಮತ್ತು ಸರ್ಕಾರಿ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಮ್/2001, ದಿನಾಂಕ: 21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ. ರಾಮಿರೆಡ್ಡಿ ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ) ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು-1 ಆದ ನಾನು ರಾಯಚೂರು ಸಹಕಾರಿ ನೂಲಿನ ಗಿರಣಿ ನಿ, ರಾಯಚೂರು ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರಲ್ಲಿ ದತ್ತವಾಗಿರುವ ಅಧಿಕಾರದನ್ವಯ ಸಹಕಾರ ಸಂಘಗಳ ಉಪ ನಿಬಂಧಕರು, ರಾಯಚೂರು ಇವರನ್ನು ಸದರಿ ಗಿರಣಿಯ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು ವರದಿ ಸಲ್ಲಿಸುವುದು ಹಾಗೂ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳನ್ವಯ ಕ್ರಮ ತೆಗೆದುಕೊಂಡು ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿ ಗಿರಣಿಯ ನೋಂದಣಿಯನ್ನು ರದ್ದುಗೊಳಿಸಲು ಸೂಕ್ತ ಪ್ರಸ್ತಾವವನ್ನು ಸಲ್ಲಿಸಲು ಸೂಚಿಸಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ಈ ದಿನಾಂಕ ಅಂದರೆ 28.10.2005 ರಂದು ನೀಡಲಾಗಿದೆ.

ಪಿ.ಆರ್. 1785

ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ)

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯದಲ್ಲಿ, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ

**ಅಧಿಭಾರ ಅರ್ಜಿ ಸಂಖ್ಯೆ: 03/2005-06**

| ವಾದಿ: | ಪ್ರತಿವಾದಿ: |
|---|---|
| ವ್ಯವಸ್ಥಾಪಕರು,<br>ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ, ಕಳಲುಘಟ್ಟ,<br>ನೆಲಮಂಗಲ ತಾಲ್ಲೂಕು. | ಶ್ರೀ ಕೃಷ್ಣಪ್ಪ ಬಿನ್ ಹುಚ್ಚಪ್ಪ,<br>ಮಾಜಿ ವ್ಯವಸ್ಥಾಪಕರು, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್<br>ನಿಯಮಿತ, ಕಳಲುಘಟ್ಟ, ನೆಲಮಂಗಲ ತಾಲ್ಲೂಕು. |

**ಸ್ಥಿರಾಸ್ತಿಯನ್ನು ಆದೇಶಕ್ಕಿಂತ ಪೂರ್ವದಲ್ಲಿ ಜಪ್ತಿ ಮಾಡುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರನ್ವಯ ನೀಡಿರುವ ನೋಟೀಸು**

ಈ ನ್ಯಾಯಾಲಯದಲ್ಲಿ ದಾಖಲಾಗಿರುವ ದಾವೆಯಲ್ಲಿ ಪ್ರತಿವಾದಿಯಾದ **ಶ್ರೀ ಕೃಷ್ಣಪ್ಪ ಬಿನ್ ಹುಚ್ಚಪ್ಪ ಮಾಜಿ ವ್ಯವಸ್ಥಾಪಕರು, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ, ಕಳಲುಘಟ್ಟ, ನೆಲಮಂಗಲ ತಾಲ್ಲೂಕು** ರವರು ಸದರಿ ಬ್ಯಾಂಕಿನ 2001-02ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಂತೆ ರೂ.7,63,162-84 ಗಳನ್ನು ಹಣ ದುರುಪಯೋಗ ಮಾಡಿರುವುದಾಗಿ ತಿಳಿಸುತ್ತಾ, ಸದರಿ ಮೊಬಲಗನ್ನು ವಸೂಲ್ಮಾಡಲು ಆದೇಶ ನೀಡಲು ಅರ್ಜಿದಾರರು ಕೋರಿರುತ್ತಾರೆ.

ಅರ್ಜಿದಾರರು ಅರ್ಜಿಯನ್ನು ಸಲ್ಲಿಸಿ, ಸದರಿ ಅರ್ಜಿಯು ಇತ್ಯರ್ಥವಾಗಲು ವಿಳಂಬವಾಗುವ ಸಾಧ್ಯತೆ ಇರುವುದರಿಂದ ಪ್ರತಿವಾದಿಗಳು ಹೊಂದಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡಿದಲ್ಲಿ ಪ್ರತಿವಾದಿಗಳು ಹಣ ದುರುಪಯೋಗ ಮಾಡಿರುವ ಮೊಬಲಗನ್ನು ವಸೂಲಿ ಮಾಡಲು ಸಾಧ್ಯವಾಗುವುದಿಲ್ಲವೆಂದು ತಿಳಿಸುತ್ತಾ, ಪ್ರತಿವಾದಿ ಹೊಂದಿರುವ ಕೆಳಗೆ ಸೂಚಿಸಿರುವ ಸ್ಥಿರಾಸ್ತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರನ್ವಯ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಕೋರಿರುತ್ತಾರೆ.

ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಿ, ಎದುರು ಅರ್ಜಿದಾರರು ಹೊಂದಿರುವ ಸ್ಥಿರಾಸ್ತಿಗಳನ್ನು ಸದರಿ ಅರ್ಜಿಯು ಇತ್ಯರ್ಥವಾಗುವ ಪೂರ್ವದಲ್ಲಿ ಮುಟ್ಟುಗೋಲು ಹಾಕಿಕೊಳ್ಳುವುದು ಅತ್ಯಾವಶ್ಯಕವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಅಂಶಗಳನ್ನು ಪರಿಗಣಿಸಿ, ಎಂ.ಡಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ/69/ಸಿ.ಎಲ್.ಎಂ./ 2001, ದಿನಾಂಕ: 21.11.2001 ರನ್ವಯ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪ್ರತಿವಾದಿ ಹೊಂದಿರುವ ಈ ಕೆಳಕಂಡ ಅನುಬಂಧದಲ್ಲಿ ಸೂಚಿಸಿರುವ ಸ್ಥಿರಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಾ, ಈ ಬಗ್ಗೆ ಪ್ರತಿವಾದಿಯು ಈ ಆದೇಶ ತಲುಪಿದ 15 ದಿನಗಳೊಳಗಾಗಿ ಮುಟ್ಟುಗೋಲು ಹಾಕಿಕೊಂಡಿರುವ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು (ಕ್ಯಾಷ್ ಸೆಕ್ಯೂರಿಟಿ) ನೀಡಿ ಸದರಿ ಆದೇಶವನ್ನು ಹಿಂತೆಗೆದುಕೊಳ್ಳಲು ಕೋರಬಹುದೆಂದು ಅವಕಾಶ ನೀಡಲಾಗಿದೆ. ತಪ್ಪಿದಲ್ಲಿ ಮುಟ್ಟುಗೋಲು ಹಾಕಿಕೊಳ್ಳಲು ನೀಡಿರುವ ಈ ಆದೇಶವನ್ನು ಸ್ಥಿರಗೊಳಿಸಲಾಗುವುದೆಂದು ಹಾಗೂ ಈ ಸ್ಥಿರಾಸ್ತಿಯನ್ನು ಮಾರಾಟ ಮಾಡಲಾಗಲಿ, ಉಡುಗೊರೆ ಹಾಗೂ ಇತರೆ ಕಾರಣಗಳಿಂದ ಪರಭಾರೆ ಮಾಡಲು ನಿಷೇಧಿಸಲಾಗಿದೆ.

ಈ ಆದೇಶವನ್ನು ದಿಕ್ಕರಿಸಿ ಕೆಳಕಂಡ ಸ್ಥಿರಾಸ್ತಿಯನ್ನು ಯಾವುದೇ ರೀತಿಯಲ್ಲಿ ಪರಭಾರೆ ಮಾಡಿದ್ದನ್ನು ಸ್ವೀಕರಿಸಿದ್ದಲ್ಲಿ ಆದಕ್ಕೆ ಅವರೇ ಸ್ವಂತ ಜವಾಬ್ದಾರರಾಗಿರುತ್ತಾರೆ.

**ಅನುಬಂಧ**

**ಮುಟ್ಟುಗೋಲು ಹಾಕಿಕೊಂಡು ಸ್ಥಿರಾಸ್ತಿಗಳ ವಿವರ**

| ಕ್ರ.ಸಂ. | ಸ್ಥಿರಾಸ್ತಿಗಳ ವಿವರ | ಸರ್ವೆ ನಂ. | ವಿಸ್ತೀರ್ಣ ಎಕರೆ-ಗುಂಟೆ | ಸ್ಥಳ |
|---|---|---|---|---|
| 1 | ವ್ಯವಸಾಯ ಜಮೀನು | 245 | 0-27 | ಟಿ.ಬೇಗೂರು, ನೆಲಮಂಗಲ ತಾ: |
| 2 | ವ್ಯವಸಾಯ ಜಮೀನು | 244 | 1-15 | ಟಿ.ಬೇಗೂರು, ನೆಲಮಂಗಲ ತಾ: |
| 3 | ವಾಸದ ಮನೆ | ಖಾ.ನಂ.288 | | ಟಿ.ಬೇಗೂರು, ನೆಲಮಂಗಲ ತಾ: |

ಈ ಆದೇಶವನ್ನು ನನ್ನ ಸಹಿ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ: 05.11.2005 ರಂದು ಹೊರಡಿಸಲಾಗಿದೆ.

**ಎಂ.ಡಿ. ನರಸಿಂಹಮೂರ್ತಿ**

ಪಿ.ಆರ್. 1786

ಸಹಕಾರ ಸಂಘಗಳ ಸಹಾಯಕ ನಿಬಂಧಕರು,

ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ.

## ಪ್ರಾಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು (ಇ.ಐ.ಬಿ.) ಬಿಜಾಪೂರ ಜಿಲ್ಲೆ, ಬಿಜಾಪೂರ ಇವರ ನ್ಯಾಯಾಲಯ

**ಸಂಖ್ಯೆ: ಇಎಕ್ಸ್‌ಇ:ಡಿಟಿಸಿಆರ್:76/2004 05, ದಿನಾಂಕ: 27ನೇ ಸೆಪ್ಟೆಂಬರ್ 2005**

**ಉಪಸ್ಥಿತರು:** ಕೆ.ಆರ್. ಗೌಡ್ರ,
ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ., ಬಿಜಾಪೂರ ಜಿಲ್ಲೆ, ಬಿಜಾಪೂರ.

**ಪಿರ್ಯಾಧಿದಾರರು:** ಡಿ.ಎಸ್. ಚವ್ಹಾಣ, ಅಬಕಾರಿ ಉಪ ನಿರೀಕ್ಷಕರು, ಬಿಜಾಪೂರ ಉಪ ವಿಭಾಗ.

**ಪ್ರಥಮ ಮಾಹಿತಿ ಸಂ:** 5/2004-05.

**ಆರೋಪಿತರು:**
1) ರಾಮನಗೌಡ ತಂದೆ ಶಂಕರಗೌಡ ದೊಡ್ಡಗೌಡರ, ವಯಸ್ಸು: 34 ವರ್ಷ, ಜಾತಿ: ಹಿಂದು ಲಿಂಗಾಯತ ಉದ್ಯೋಗ: ವಾಹನ ಚಾಲಕ, ವಾಸ ಸ್ಥಳ: ಕೊಟೆಗೊಂಡ ಹುಣಸಿ, ತಾ: ಹುಬ್ಬಳ್ಳಿ, ಜಿ: ಧಾರವಾಡ.
2) ಅಹಮ್ಮದ್ ಹುಸೇನ್ ತಂದೆ ಹುಸೇನ್ ಸಾಬ ಕಿತ್ತೂರ, ವಯಸ್ಸು: 36 ವರ್ಷ, ಜಾತಿ: ಮುಸ್ಲಿಂ, ಉದ್ಯೋಗ: ವಾಹನ ರಿಪೇರಿ ಮಾಡುವುದು, ವಾಸ ಸ್ಥಳ: ಗಣೇಶ ಪೇಟ, ಚಂದರಿಗಿ ಓಣಿ, ಹುಬ್ಬಳ್ಳಿ.

3) ಶ್ರೀಮಂತ ತಂದೆ ಅಣ್ಣೆಪ್ಪ ಪೂಜಾರಿ ಸಾ: ಹಂಜಗಿ, ತಾ: ಇಂಡಿ, ಜಿ: ಬಿಜಾಪೂರ.

4) ಶ್ರೀ ಅಬ್ದುಲ ಕರೀಂ ಬಿನ್ ಹಬೀಬ ಅಹಮ್ಮದ,
ಫ್ರೂಟ್ ಮರ್ಚೆಂಟ್, ಫಿಷ್ ಮಾರ್ಕೇಟ್, ಶಿರಸಿ, (ವಾಹನದ ಮಾಲೀಕರು)

**ಪ್ರಸ್ತಾವನೆ:**

ದಿನಾಂಕ-21-03-2005 ರಂದು ರಾತ್ರಿ 8-30ಕ್ಕೆ ಬಿಜಾಪೂರದಿಂದ ಸೋಲ್ಲಾಪೂರಕ್ಕೆ ಹೋಗುವ ರಾಷ್ಟ್ರೀಯ ಹೆದ್ದಾರಿ ನಂ.13ರ ಭೂತನಾಳ ಕ್ರಾಸ ಹತ್ತಿರ ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ಉಪ ವಿಭಾಗ ಮತ್ತು ಸಿಬ್ಬಂದಿ ಜನರು ರಸ್ತೆಕಾವಲು ನಡೆಸುತ್ತಿರುವಾಗ ಬಿಜಾಪುರ ಶಹರದ ಕಡೆಗೆ ಒಂದು ಬಿಳಿಯ ಬಣ್ಣದ ವಾಹನ ವೇಗವಾಗಿ ತಮ್ಮ ಕಡೆಗೆ ಬರುವುದನ್ನು ಕಂಡು ಸದರಿ ವಾಹನವನ್ನು ತಡೆದು. ವಾಹನದ ಚಾಲಕನನ್ನು ವಿಚಾರಿಸಲಾಗಿ ಅವನು ತನ್ನ ಹೆಸರು ರಾಮನಗೌಡ ತಂದೆ ಶಂಕರಗೌಡ ದೂಡ್ಡಗೌಡರ ಎಂದು ಹೇಳಿದನು. ಸದರಿ ವಾಹನದಲ್ಲಿ ಇನ್ನೂ ಎರಡು ಜನ ಆರೋಪಿತರು ಇರುವುದು ಕಂಡು ಬಂದಿದ್ದು. ಅದರಲ್ಲಿ ಒಬ್ಬ ಆರೋಪಿತನು ಓಡಿ ಪರಾರಿಯಾಗಿದ್ದಾನೆ ಇನ್ನೂಬ್ಬ ಆರೋಪಿತನ ಹೆಸರನ್ನು ಸದರಿ ಅಬಕಾರಿ ಅಧಿಕಾರಿಗಳು ವಿಚಾರಿಸಲಾಗಿ ಆತನ ಹೆಸರು ಮೊಹಮ್ಮದ ಹುಸೇನ ತಂದೆ ಹುಸೇನ ಸಾಬ ಕಿತ್ತೂರ ಸಾ!!ಹುಬ್ಬಳ್ಳಿ ಎಂದು ತಿಳಿಸಿರುತ್ತಾರೆ ಪರಾರಿಯಾದ ಆರೋಪಿತನು ಹಿಡಿಯಲು ಅಬಕಾರಿ ಅಧಿಕಾರಿಗಳು ಪ್ರಯತ್ನಿಸಲಾಗಿ ಆತನ ಸಿಗದ್ದಿದರಿಂದ ಆತನ ಹೆಸರು ಶ್ರೀಮಂತ ಜೆಟ್ಟೆಪ್ಪ ಪೂಜಾರಿ ಅಂತಾ ತಿಳಿದು ಬಂದಿರುತ್ತದೆ. ನಂತರ ಅಬಕಾರಿ ಅಧಿಕಾರಿಗಳು ಸದರಿ ವಾಹನದ ಹತ್ತಿರ ಬಂದು ವಾಹನವನ್ನು ಶೊಧಿಸಲಾಗಿ ವಾಹನದಲ್ಲಿ ನಕಲಿ ಮದ್ಯದ ಬಾಟಲಿಗಳಿರುವ ಪೆಟ್ಟಿಗೆಗಳು ಇರುವುದು ಕಂಡು ಬಂದಿದ್ದು ಸದರಿ ಮದ್ಯದ ಬಾಟ್ಲಿಗಳ ವಿವರ ಈ ಕೆಳಕಂಡಂತೆ ಇರುತ್ತದೆ.

| | | | |
|---|---|---|---|
| 1. ಬೂನಿ ಸ್ಕಾಟ ವಿಸ್ಕಿ | 180 | ಎಂಎಲ್‌ದ | 21 ಬಾಟ್ಲಿಗಳು |
| 2. ಮ್ಯಾಕ್‌ಡೆವಲ್ ರಮ್ | 180 | ಎಂಎಲ್‌ದ | 134 ಬಾಟ್ಲಿಗಳು |
| 3. ಓಲ್ಡಮಂಕ ರಮ್ | 180 | ಎಂಎಲ್‌ದ | 182 ಬಾಟ್ಲಿಗಳು |
| 4. ಓಲ್ಡಟವರಿನ ವಿಸ್ಕಿ | 180 | ಎಂಎಲ್‌ದ | 48 ಬಾಟ್ಲಿಗಳು |
| 5. ಮ್ಯಾಕ್‌ಡವೆಲ್ ವಿಸ್ಕಿ | 180 | ಎಂಎಲ್‌ದ | 39 ಬಾಟ್ಲಿಗಳು |
| 6. ಬ್ಯಾಗಪೈಪರ್ ವಿಸ್ಕಿ | 180 | ಎಂಎಲ್‌ದ | 04 ಬಾಟ್ಲಿಗಳು |
| 7. ಓರಿಜನಲ್ ಚಾಯಿಸ ವಿಸ್ಕಿ | 180 | ಎಂಎಲ್‌ದ | 160 ಬಾಟ್ಲಿಗಳು |

ಒಟ್ಟು 150.840 ಲೀಟರ ಕರಕೂಡದ ನಕಲ ಮದ್ಯ ಇರುವುದೆಂದು ಮತ್ತು ವಾಹನದ ಚಾಲಕನು ಈ ನಕಲಿ ಮದ್ಯದ ಬಗ್ಗೆ ಯಾವುದೇ ಕಾಗದ ಪತ್ರಗಳನ್ನು ಹಾಜರು ಪಡಿಸಿರುವುದಿಲ್ಲಾ ಮತ್ತು ಸಮರ್ಪಕವಾಗಿ ಉತ್ತರ ನೀಡಿರುವುದಿಲ್ಲಾವೆಂದು ಅಬಕಾರಿ ಅಧಿಕಾರಿಗಳು ತಿಳಿಸಿರುತ್ತಾರೆ. ಸದರಿ ವಾಹನವು ಬಿಳಿಯ ಬಣ್ಣದ ಟಾಟ ಮೊಬೈಲ್-206 ಇದ್ದು ಅದರ ಸಂ:ಕೆಎ:31:242 ಇದ್ದು ಚಸ್ಸಿ ನಂಬರ: 371005952490 ಇರುತ್ತದೆ ಎಂದು ತಿಳಿಸಿರುತ್ತಾರೆ ಅಬಕಾರಿ ಅಧಿಕಾರಿಗಳು 1 ರಿಂದ 7 ರವರೆಗಿನ ಬಾಟ್ಲಿಗಳನ್ನು ರಸಾಯನ ಮಾದರಿಗಾಗಿ ತೆಗೆದು ಶೀಲ ಮಾಡಿ ಪಂಚರ ಸಹಿ ಮಾಡಿದ ಚೀಟಿಯನ್ನು ಅಂಟಿಸಿರುತ್ತಾರೆ. ಮತ್ತು ವಾಹನದಲ್ಲಿರುವ ಎಲ್ಲ ಮದ್ಯದ ಬಾಟ್ಲಿಗಳನ್ನು ಮತ್ತು ವಾಹನ ಸಂ:ಕೆಎ-31-242ನ್ನು ಜಪ್ತು ಮಾಡಿ ಆರೋಪಿಗಳನ್ನು ದಸ್ತಗಿರಿ ಮಾಡಿ ತಮ್ಮತಾಬಾಕ್ಕೆ ತೆಗೆದುಕೊಂಡಿರುತ್ತಾರೆ. ಇದರ ಬಗ್ಗೆ ಪಂಚರ ಸಮಕ್ಷಮ ಪಂನಾಮೆ ಕ್ರಮ ಜರುಗಿಸಿ ಗುನ್ನೆ ನಂ 05/2004-05 ದಿನಾಂಕ:-21-03-2005 ರಂದು ದಾಖಲಿಸಿ ಆರೋಪಿತರನ್ನು ನ್ಯಾಯಾಲಯ ವಶಕ್ಕೆ ಒಪ್ಪಿಸಿರುತ್ತಾರೆ. ನಂತರ ಸದರಿ ಪ್ರಕರಣವನ್ನು ಮುಂದಿನ ತನಿಖೆಗೋಸ್ಕರ ಸಂಬಂಧಪಟ್ಟ ಕಾಗದ ಪತ್ರಗಳನ್ನು ಹಾಗೂ ಜಪ್ತುಮಾಡಿದ ಮುದ್ದೇಮಾಲನ್ನು ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ನಗರ ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಲಾದ ವಾಹನದ ಮಾಲೀಕರ ಹೆಸರು ಮತ್ತು ವಿಳಾಸ (ಬಿ ಎಕ್ಸಟ್ರ್ಯಾಕ್ಟ) ಪಡೆಯಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿರಸಿ ಇವರಿಗೆ ಪತ್ರ ಬರೆಯಲಾಗಿ ಸದರಿ ವಾಹನ ಕೆಎ-31-242 ಶ್ರೀ ಅಬ್ದುಲ ಕರೀಂ ಬಿನ್ ಹಾಜಿ ಕೆ ಅಹಮ್ಮದ ಫ್ರೂಟ್ ಮರ್ಚಂಟ್. ಫೀಷ್ ಮಾರ್ಕೇಟ್ ಶಿರಸಿ ಎಂದು ದೃಢಪಡಿಸಿ ಬಿ ಎಕ್ಸಟ್ರ್ಯಾಕ್ಟನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿಕೊಟ್ಟಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ನಗರ ಉಪ ವಲಯ ಇವರು 7 ಬ್ರ್ಯಾಂಡಿನ ಮದ್ಯದ ಮಾದರಿಗಳನ್ನು ರಸಾಯನಿಕ ವಿಶ್ಲೇಷಣೆಗೆ ರಸಾಯನಿಕ ತಜ್ಞರಿಗೆ ಕಳುಹಿಸಿಕೊಟ್ಟಿದ್ದು ಸದರಿ ರಸಾಯನಿಕ ಮಾದರಿಗಳು ಮದ್ಯಸಾರದ ಅಂಶಇದ್ದು ಮತ್ತು ನಕಲಿ ಮದ್ಯ ಇರುತ್ತದೆ ಎಂದು ದೃಢಿಕರಿಸಿ ರಸಾಯನಿಕ ತಜ್ಞರು ವರದಿ ನೀಡಿರುತ್ತಾರೆ.

ದಿನಾಂಕ:-29-07-2005 ರಂದು ಈ ಪ್ರಾಧಿಕಾರದಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ಪ್ರಕಾರ ಕಾರಣ ಕೇಳುವ ನೋಟೀಸನ್ನು ವಾಹನ ಮಾಲೀಕರಾದ ಅಬ್ದುಲ ಕರೀಂ ಬಿನ್ ಹಾಜಿ ಕೆ ಅಹಮ್ಮದ ಶಿರಸಿ ಮತ್ತು ಎಲ್ಲ ಆರೋಪಿತರುಗಳಿಗೆ ನೋಟಿಸು ಹೊರಡಿಸಲಾಯಿತು ಮತ್ತು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 43(ಎ) ಪ್ರಕಾರ ಈ ಪ್ರಾಧಿಕಾರವು ದಿನಾಂಕ:-19-09-2005 ರಂದು ವಿಚಾರಣೆಯನ್ನು ನಡೆಸಲಾಗುವುದೆಂದು ನೋಟಿಸ್ ತೆಗೆಯಲಾಯಿತು.

ದಿನಾಂಕ:19-09-2005 ರಂದು ವಿಚಾರಣೆಯನ್ನು ನಡೆಸಲಾಯಿತು ಅಭಿಯೋಗದ ಪರವಾಗಿ ಸಹಾಯಕ ಅಭಿಯೋಗದ ನಿರ್ದೇಶಕರು ಬಿಜಾಪೂರ ಇವರು ಹಾಜರ ಇದ್ದು ಅಭಿಯೋಗದ ಪರವಾಗಿ ಸಾಕ್ಷಿದಾರರಾದ ಪ್ರ.ಸಾ-1. ಪ್ರಾ.ಸಾ-2 ಮತ್ತು ಪ್ರಾ.ಸಾ-3 ರಂತೆ ವಿಚಾರಣೆ ಮಾಡಿ ಮೂರು (3) ದಾಖಲಾತಿಗಳನ್ನು ಮತ್ತು ಎರಡು ಮುದ್ದೇಮಾಲುಗಳನ್ನು ಗುರುತಿಸಿದ್ದು ಇರುತ್ತದೆ.

ಪ್ರಾ . ಸಾ1 ಇವರು ಸಾಕ್ಷಿ ನುಡಿಯುತ್ತಾ ದಿನಾಂಕ: 21-03-2005 ರಂದು ರಾತ್ರಿ 8-30ಕ್ಕೆ ಬಿಜಾಪೂರ ದಿಂದ ಸೋಲ್ಲಾಪೂರಕ್ಕೆ ಹೋಗುವ ರಾಷ್ಟ್ರೀಯ ಹೆದ್ದಾರಿ 13ರಲ್ಲಿ ಭೂತನಾಳ ಕ್ರಾಸ ಹತ್ತಿರ ರಸ್ತೆ ಕಾವಲು ನಡೆಸಿ ವಾಹನ ಟಾಟಾ ಮೊಬೈಲ್-206 ಸಂಖ್ಯೆ: ಕೆಎ 31/242ನ್ನು ಜಪ್ತು ಮಾಡಿರುವುದಾಗಿ ತಿಳಿಸಿರುತ್ತಾರೆ. ಆ ಸಮಯದಲ್ಲಿ ಇಬ್ಬರು (2) ಆರೋಪಿತರನ್ನು ಬಂದಿಸಲಾಗಿ ಮತ್ತೊಬ್ಬ ಆರೋಪಿತನು ಪರಾರಿಯಾಗಿರುತ್ತಾನೆ ಅಂತಾ ತಿಳಿಸಿರುತ್ತಾರೆ. ಆ ಸಮಯದಲ್ಲಿ ಆರೋಪಿತರು ಮದ್ಯದ ಬಾಟಲಿಗಳನ್ನು ಸಾಗಾಣಿಕೆ ಮಾಡಲು ಯಾವುದೇ ಕಾಗದ ಪತ್ರಗಳನ್ನು ಹಾಜರಿ ಪಡಿಸಿರುವುದಿಲ್ಲಾ. ಮತ್ತು ಪಂಚರ ಸಮಕ್ಷಮ ರಸಾಯನಿಕ ಮಾದರಿಗಳನ್ನು ತೆಗೆದು ವಾಹನ ಮತ್ತು ಮದ್ಯವನ್ನು ಜಪ್ತು ಪಡಿಸಿ ಪಂಚನಾಮೆಯನ್ನು ಜರುಗಿಸಿ ಪಂಚನಾಮೆ ಹಾಗೂ ಪ್ರಥಮ ವರ್ತಮಾನ ವರದಿಯೊಂದಿಗೆ ಸರಕಾರದ ತರ್ಫೆ ಪಿರ್ಯಾಧಿಯನ್ನು ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಅವುಗಳ ಪ್ರತಿಗಳನ್ನು ಗುರುತಿಸಿ ಅವುಗಳಿಗೆ ನಿಶಾನೆ ಪಿ-1, ಮತ್ತು ಪಿ-2 ಎಂದು ಗುರುತಿಸಲಾಯಿತು. ಅವುಗಳಲ್ಲಿ

ಸಹಿಗಳನ್ನು ಗುರುತಿಸಿ ಅವುಗಳಿಗೆ ನಿಶಾನೆ ಪಿ-1(ಎ) ಮತ್ತು ಪಿ-2(ಎ) ಎಂದು ಸಹ ಗುರುತಿಸಲಾಗಿದೆ. ಜಪ್ತು ಮಾಡಿದ ವಾಹನ ಮತ್ತು ಶ್ಯಾಂಪಲ ಬಾಟಲಿಗಳನ್ನು ಗುರುತಿಸಿ ಅವುಗಳನ್ನು ಅನುಕ್ರಮವಾಗಿ ಮುದ್ದೇಮಾಲು-1 ಮತ್ತು 2 ಗುರುತಿಸಲಾಗಿದೆ ಸಾಕ್ಷಿದಾರರು ಮುಂದಿನ ತನಿಖೆಗಾಗಿ ಪ್ರಕರಣವನ್ನು ಅಬಕಾರಿ ಉಪ ನಿರೀಕ್ಷಕರು ಬಿಜಾಪುರ ನಗರ ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ. ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲಾ. ಸಾಕ್ಷಿದಾರರು ಸಾಕ್ಷಿ ಹೇಳುವ ಸಮಯದಲ್ಲಿ ವಾಹನ ಮಾಲೀಕರು ಇಲ್ಲದಿದ್ದರಿಂದ ಪಾಟಿ ಸಾವಲು ಇಲ್ಲವೆಂದು ಪರಿಗಣಿಸಲಾಯಿತು. ಸಾಕ್ಷಿದಾರರ ಹೇಳಿಕೆಯನ್ನು ಹಾಗೂ ವಾಹನದ ಮಾಲೀಕರ ಗೈರ ಹಾಜರಾತಿಯನ್ನು ಪರಿಶೀಲಿಸಲಾಗಿ ಸದರಿ ವಾಹನ ಅಕ್ರಮ ಮದ್ಯವನ್ನು ಸಾಗಾಣಿಕೆಯಲ್ಲಿ ತೊಡಗಿರುವುದಕ್ಕೆ ಪುಷ್ಟಿ ನೀಡುತ್ತಿದೆ.

ಪ್ರ.ಸಾ-2 ಇವರು ಸಾಕ್ಷಿ ನುಡಿಯುತ್ತಾ ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ಉಪ ವಿಭಾಗ ಇವರಿಂದ ಮುಂದಿನ ತನಿಖೆಗಾಗಿ ವಾಹನ ಮತ್ತು ಮದ್ಯವನ್ನು ಪಡೆದಿರುವುದಾಗಿ ತಿಳಿಸಿರುತ್ತಾರೆ. ಜಪ್ತು ಮಾಡಿದ ರಸಾಯನಿಕ ಮಾದರಿಗಳನ್ನು ರಸಾಯನಿಕ ವಿಶ್ಲೇಷಣೆಗಾಗಿ ರಸಾಯನಿಕ ತಜ್ಞರಿಗೆ ಕಳುಹಿಸಲಾಗಿ ರಸಾಯನಿಕ ತಜ್ಞರು ಸದರಿ ಮದ್ಯದ ಮಾದರಿಗಳಲ್ಲಿ ಮದ್ಯದ ಅಂಶವು ಇದ್ದು ಅವುಗಳಲ್ಲಿರುವ ಮದ್ಯವು ನಕಲಿ ಮದ್ಯ ಇರುತ್ತದೆ. ಎಂದು ತಿಳಿಸಿರುತ್ತಾರೆ ಎಂದು ಹೇಳಿಕೆ ನೀಡಿರುತ್ತಾರೆ. ಸದರಿ ರಸಾಯನಿಕ ತಜ್ಞರ ವರದಿಯ ಪ್ರತಿಯನ್ನು ನೋಡಿ ಗುರುತಿಸಿದರು ಅದಕ್ಕೆ ನಿಶಾನೆ ಪಿ- 3 ಎಂದು ಗುರುತಿಸಲಾಗಿದೆ. ಸದರಿ ಸಾಕ್ಷಿದಾರರ ಹೇಳಿಕೆಯ ಸಮಯದಲ್ಲಿ ವಾಹನ ಮಾಲೀಕರು ಇಲ್ಲದ್ದರಿಂದ ಪಾಟಿ ಸವಾಲ ಇಲ್ಲವೆಂದು ಪರಿಗಣಿಸಲಾಯಿತು.

ಪ್ರಾ.ಸಾ-3 ಇವರು ಅಬಕಾರಿ ರಕ್ಷಕರಾಗಿದ್ದು ಪಂಚಸಾಕ್ಷಿದಾರರು ದೂರೆಯಿದ್ದರಿಂದ ಇವರೇ ಪಂಚರಾಗಿ ಕರ್ತವ್ಯ ನಿರ್ವಹಿಸಿ ಸಾಕ್ಷಿ ನುಡಿದಿದ್ದಾರೆ ಸದರಿ ಪಂಚ ಸಾಕ್ಷಿದಾರರ ಸಮ್ಮುಖದಲ್ಲಿ ಭೂತನಾಳ ಕ್ರಾಸ ಹತ್ತಿರ ಅಕ್ರಮವಾಗಿ ಮದ್ಯವನ್ನು ಸಾಗಿಸುತ್ತಿದ್ದ ಟಾಟಾ ಮೊಬೈಲ್-206 ವಾಹನವನ್ನು ನಿಲ್ಲಿಸಿ ವಿವಿಧ ಮದ್ಯದ ಬ್ರ್ಯಾಂಡಿನ ಬಾಟಲಿಗಳಿದ್ದ 13 ರಟ್ಟಿನ ಪೆಟ್ಟಿಗೆಗಳನ್ನು ವಶಪಡಿಸಿಕೊಂಡಿದ್ದು ಆರೋಪಿತರನ್ನು ಬಂಧಿಸಿದ್ದು ಹಾಗೂ ಆರೋಪಿತರು ಮದ್ಯ ಸಾಗಾಣಿಕೆಗೆ ಯಾವುದೇ ಕಾಗದ ಪತ್ರಗಳನ್ನು ಹಾಜರ ಪಡಿಸಲಾರದ್ದು ಸತ್ಯ ಇರುತ್ತದೆ ಎಂದು ಸಾಕ್ಷಿ ನುಡಿದಿರುತ್ತಾರೆ. ಈ ಪಂಚಸಾಕ್ಷಿದಾರರ ಸಮ್ಮುಖದಲ್ಲಿ ರಸಾಯನಿಕ ವಿಶ್ಲೇಷಣೆಗಾಗಿ ಮದ್ಯದ ಬಾಟಲಿಗಳನ್ನು ಮಾದರಿಯಾಗಿ ತೆಗೆದಿದ್ದು ಹಾಗೂ ಸಾಕ್ಷಿದಾರರ ಸಹಿಮಾಡಿದ ಚೀಟಿಗಳನ್ನು ಅಂಟಿಸಿರುವುದನ್ನು ಕೂಡಾ ತಮ್ಮ ಸಾಕ್ಷಿಯಲ್ಲಿ ನುಡಿದಿರುತ್ತಾರೆ. ಅಬಕಾರಿ ಅಧಿಕಾರಿಗಳು ಈ ಸಾಕ್ಷಿದಾರನ ಸಮ್ಮುಖದಲ್ಲಿಯೇ ಪಂಚನಾಮೆಯನ್ನು ಬರೆದು ಸಾಕ್ಷಿದಾರನ ಸಹಿ ಪಡೆದಿರುತ್ತಾರೆಂದು ತಿಳಿಸಿರುತ್ತಾರೆ. ಪಂಚನಾಮೆಯಲ್ಲಿರುವ ಸಹಿಯನ್ನು ಗುರುತಿಸಿರುತ್ತಾರೆ ಅದಕ್ಕೆ ನಿಶಾನೆ ಪಿ -1(ಬ) ಎಂದು ಗುರುತಿಲಾಯಿತು. ಈ ಸಾಕ್ಷಿದಾರನ ಸಮ್ಮುಖದಲ್ಲಿಯೇ ಆರೋಪಿತರನ್ನು ಬಂಧಿಸಿ ವಾಹನ ಮತ್ತು ಮದ್ಯದ ಬಾಟಲಿಗಳನ್ನು ಅಬಕಾರಿ ಅಧಿಕಾರಿಗಳು ಜಪ್ತು ಮಾಡಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಈ ಸಾಕ್ಷಿದಾರನು ಸಾಕ್ಷಿ ನುಡಿಯುವ ಸಮಯದಲ್ಲಿ ವಾಹನದ ಮಾಲೀಕರು ಹಾಜರ ಇರದ್ದರಿಂದ ಪಾಟಿ ಸವಾಲು ಇಲ್ಲವೆಂದು ಪರಿಗಣಿಸಲಾಯಿತು. ಪಂಚ ಸಾಕ್ಷಿದಾರನ ಸಾಕ್ಷಿಯನ್ನು ಪರಿಶೀಲಿಸಲಾಗಿ ಅಭಿಯೋಗದ ಪರವಾಗಿ ಪುಷ್ಠಿ ನೀಡಿರುವುದು ಕಂಡು ಬರುತ್ತದೆ.

ವಾಹನ ಸಂಖ್ಯೆ ಕೆಎ-31/242ಕ್ಕೆ ಶ್ರೀ. ಅಬ್ದುಲ ಕರೀಂ ಬಿನ್ ಹಾಜೀ ಕೆ ಅಹಮ್ಮದ್ರ ಫ್ರೂಟ್ ಮರ್ಚಂಟ್, ಫಿಷ್ ಮಾರ್ಕೆಟ್, ಶಿರಸಿ ಎಂಬುವರು ಇರುತ್ತಾರೆ ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿರಸಿ ಇವರು ಧೃಢಪಡಿಸಿರುತ್ತಾರೆ. ದಿನಾಂಕ:-24-09-2005 ರಂದು ವಾಹನದ ಮಾಲೀಕರಾದ ಅಬ್ದುಲ ಕರೀಂ ಬಿನ್ ಹಾಜಿ ಕೆ ಅಹಮ್ಮದ ಶಿರಸಿ ಇವರು ಈ ಪ್ರಾಧಿಕಾರಕ್ಕೆ ಅಂಚೆ ಮೂಲಕ ಅರ್ಜಿ ಸಲ್ಲಿಸಿ. ಸದರಿ ಅರ್ಜಿಯಲ್ಲಿ ಸದರಿ ವಾಹನ ಸಂಖ್ಯೆ: ಕೆಎ-31/242ನ್ನು ನಾನು ಮಾಲೀಕನಾಗಿರುವುದಿಲ್ಲಾ ಸದರಿ ವಾಹನವನ್ನು ಈಗಾಗಲೇ ಅಬ್ದುಲ ಸತ್ತಾರ ವಿನ್ ಅಬ್ಬಾಸ ಸಾಬ ನೆಹರು ನಗರ ಶಿರಸಿ, ಎಂಬುವರಿಗೆ ಮಾರಾಟ ಮಾಡಿರುತ್ತೇನೆ, ಅಲ್ಲದೇ ಅಬ್ದುಲ ಸತ್ತಾರ ಅಬ್ಬಾಸ ಸಾಬ ನೆಹರು ನಗರ ಶಿರಸಿ ಇವರು ರಾಮನಗೌಡ ತಂದೆ ಶಂಕರಗೌಡ ಎಂಬುವರೆಗೆ ಮಾರಾಟ ಮಾಡಿರುತ್ತಾರೆ ಎಂದು ಅರ್ಜಿಯಲ್ಲಿ ತಿಳಿಸಿರುತ್ತಾರೆ. ನಾನು ಈಗ ಸದರಿ ವಾಹನದ ಮಾಲೀಕನಾಗಿರುವುದಿಲ್ಲಾ. ಅಕ್ರಮವಾಗಿ ಮದ್ಯ ಸಾಗಾಣಿಕೆ ಮಾಡಿರುವುದಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲಾ ಎಂದು ತಿಳಿಸಿರುತ್ತಾರೆ. ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿರಸಿ (ಉತ್ತರ ಕನ್ನಡ) ಇವರು ಹಿಂಬರಹ ಪತ್ರವನ್ನು ನೀಡಿ ಸದರಿ ವಾಹನ ಕೆಎ-31/242ನ್ನು ರಾಮನಗೌಡ ತಂದೆ ಶಂಕರಗೌಡ ದೂಡ್ಡಗೌಡರ ಕೊಟೆಗೊಂಡ ಹುಣಸಿ ಹುಬ್ಬಳ್ಳಿ. ಧಾರವಾಡ ಇವರ ಹೆಸರಿಗೆ ಸದರಿ ವಾಹನ ಮಾಲೀಕತ್ವದ ವರ್ಗಾವಣೆಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಧಾರವಾಡ ಇವರಿಗೆ ತಿಳಿಸಿರುತ್ತಾರೆ ಸದರಿ ಹಿಂಬರಹದ ಪತ್ರದ ಪ್ರತಿಯನ್ನು ಅಬ್ದುಲ್ ಕರೀಂ ನಿನ್ ಹಜಿ ಕೆ ಅಹಮ್ಮದ ಇವರು ತಮ್ಮ ಅರ್ಜಿಯೊಂದಿಗೆ ಲಗತ್ತಿಸಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ರಾಮನಗೌಡ ಬಿನ್ ಶಂಕರಗೌಡ ದೂಡ್ಡಗೌಡರ ಇವರು ಈ ಗುನ್ಹೆಯಲ್ಲಿ ಮೊದಲನೇ ಆರೋಪಿತರಾಗಿರುತ್ತಾರೆ.

ಮೇಲ್ಕಾಣಿಸಿದ ಅಂಶಗಳನ್ನು ಪರಿಶೀಲಿಸಲಾಗಿ ಸದರಿ ವಾಹನ ಟಾಟಾ ಮೊಬೈಲ್ ಸಂಖ್ಯೆ:ಕೆಎ-31-242ರಲ್ಲಿ ನಕಲಿ ಮದ್ಯ ಸಾಗಾಣಿಕೆ ಮಾಡುತ್ತಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ನಗರ ಉಪವಲಯ ಇವರು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿ ಸದರಿ ವಾಹನವು ತನ್ನದೆಂದು ಯಾರು ಮುಂದೆ ಬಂದಿರುವುದಿಲ್ಲಾ. ಮತ್ತು ಸದರಿ ವಾಹನವನ್ನು ಕಛೇರಿಯ ಆವರಣದಲ್ಲಿ ನಿಲ್ಲಿಸಿರುವುದರಿಂದ ವಾತವರಣದ ವೈಪರೀತ್ಯದಿಂದ ಮೌಲ್ಯವನ್ನು ಕಳೆದುಕೊಳ್ಳುವ ಸಾಧ್ಯತೆಗಳು ಇರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ತಿಳಿಸಿರುತ್ತಾರೆ. ಈ ಮೇಲಿನ ಅಂಶಗಳನ್ನು ಪರಿಶೀಲಿಸಲಾಗಿ ಸದರಿ ವಾಹನವನ್ನು ತಿಳುವಳಿಕೆಯಿಂದಲೇ ಕಾನೂನು ಬಾಹಿರ ಕೃತ್ಯದಲ್ಲಿ ಉಪಯೋಗಿಸಿರುತ್ತಾರೆಂದು ಭಾವಿಸಬಹುದಾಗಿರುತ್ತದೆ. ಇನ್ನೂ ಮುಂದೆ ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ಹಿತದೃಷ್ಠಿಯಿಂದ ವಾಹನ ಟಾಟಾ ಮೊಬೈಲ್ ಕೆಎ-31-242 ಮತ್ತು ಮೇಲ್ಕಾಣಿಸಿದ ವಿವಿಧ ಬ್ರ್ಯಾಂಡಿನ ನಕಲಿ ಮದ್ಯದ 13 ರಟ್ಟಿನ ಪೆಟ್ಟಿಗೆಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶದ ಸಂ: ಇಎಕ್ಸ್‌ಇಟಿಸಿಆರ್:ಬಿಜೆಪಿ :76:2004-05 ದಿನಾಂಕ:-27ನೇ ಸೆಪ್ಟೆಂಬರ್ 2005**

ಕೆ.ಆರ್.ಗೌಡ್ರ. ಪಾಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ ಬಿಜಾಪೂರ ಜಿಲ್ಲೆ. ಬಿಜಾಪೂರ ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ 43(ಸಿ) ಅನ್ವಯ ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ಉಪ ವಿಭಾಗ ಇವರ ಮೊಕದ್ದಮೆ ಸಂಖ್ಯೆ:05/2004-05 ದಿನಾಂಕ:-21-03-2005 ದಲ್ಲಿ ವಶಪಡಿಸಿಕೊಂಡಿರುವ ಟಾಟಾ ಮೊಬೈಲ್ ಸಂ:ಕೆಎ-31-242ನ್ನು ಮತ್ತು ವಿವಿಧ ಬ್ರ್ಯಾಂಡಿನ ನಕಲಿ ಮದ್ಯದ ಬಾಟಲ್‌ಗಳಿದ್ದ 13 ರಟ್ಟಿನ ಪೆಟ್ಟಿಗೆಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಮೇಲೆ ತಿಳಿಸಿದ ನಕಲಿ ಮದ್ಯವನ್ನು ಅಬಕಾರಿ ಉಪ ಅಧೀಕ್ಷಕರು ಬಿಜಾಪೂರ ಉಪ ವಿಭಾಗ ಇವರ ಸಮಕ್ಷಮ (ಶ್ಯಾಂಪಲ ಬಾಟಲಿಗಳನ್ನು ಹೊರತುಪಡಿಸಿ) ನಾಶಪಡಿಸಲು ಆದೇಶಿಸಿದೆ.

ಅಕ್ರಮ ಮದ್ಯ ಸಾಗಾಣಿಕೆಯಲ್ಲಿ ಸಿಲುಕಿರುವ ಆರೋಪಿತರ ಮೇಲೆ ದೋಷಾರೋಪಣೇ ಪಟ್ಟಿಯನ್ನು ನ್ಯಾಯಾಲಯದಲ್ಲಿ ಸಲ್ಲಿಸಲು ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ತಾಲ್ಲೂಕು ಜಾರಿ ಮತ್ತು ತನಿಖೆ ಇವರಿಗೆ ಆದೇಶಿಸಿದೆ.

ಈ ಆದೇಶವನ್ನು ಇಂದು ದಿನಾಂಕ:-27-09-2005 ರಂದು ವಿಷಯ ನಿರ್ವಾಹಕರಿಗೆ ಉತ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚಿನ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

**ಕೆ.ಆರ್. ಗೌಡ್ರ**
ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ
ಬಿಜಾಪೂರ ಜಿಲ್ಲೆ. ಬಿಜಾಪೂರ.

**ಅನುಬಂಧ (1)**

**ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷ್ಯಗಳ ವಿವರ**

| | | |
|---|---|---|
| ಪ್ರಾ ಸಾ-1 | ಧನುಸಿಂಗ್ ಸೋಮು ಚವ್ಹಾಣ<br>ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ಉಪ ವಿಭಾಗ | ತನಿಖಾಧಿಕಾರಿ |
| ಪ್ರಾ ಸಾ-2 | ಮಲ್ಲಪ್ಪ ಭೀಮಪ್ಪ ಹಳ್ಳದಮನಿ<br>ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ನಗರ ಉಪ ವಲಯ | ತನಿಖಾಧಿಕಾರಿ. |
| ಪ್ರಾ ಸಾ-3 | ಕೃಷ್ಣಜಿ.ಯ. ಹಡಲಗೇರಿ<br>ಅಬಕಾರಿ ರಕ್ಷಕ, ಬಿಜಾಪೂರ ಉಪ ವಿಭಾಗ | ಪಂಚ ಸಾಕ್ಷಿ |

**ಅನುಬಂಧ (2)**

**ಫಿರ್ಯಾಧಿದಾರರ ಪರ ಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ- ಪಿ-1 | ಪಂಚನಾಮೆ ಧೃಡೀಕೃತ ಪತ್ರ |
| ನಿಶಾನೆ- ಪಿ-1(ಎ) | ಪ್ರಾ.ಸಾ -1 ರವರ ಸಹಿ |
| ನಿಶಾನೆ- ಪಿ-2 | ಪ್ರಥಮ ವರ್ತಮಾನ ವರದಿ |
| ನಿಶಾನೆ- ಪಿ-2(ಎ) | ಪ್ರಾ ಸಾ-1 ರವರ ಸಹಿ |
| ನಿಶಾನೆ- ಪಿ-3 | ರಸಾಯನಿಕ ತಜ್ಞರ ವರದಿಯ ಪ್ರತಿ |
| ನಿಶಾನೆ- ಪಿ-1 (ಬ) | ಪಂಚನಾಮೆಯಲ್ಲಿರುವ ಸಹಿ |

**ಅನುಬಂಧ - (3)**

**ಪೀರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

1) ಎಂ.ಓ.- 1 ವಾಹನ ನಂಬರ ಟಾಟಾ ಮೊಬೈಲ್ ಕೆಎ-31-242
2) ಎಂ.ಓ.- 2 ಮಾದರಿ ಮದ್ಯದ ಬಾಟ್ಲಿಗಳು

**ಅನುವಂಧ - (4)**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು**

ಇಲ್ಲಾ.

**ಅನುಬಂಧ- (5)**

**ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು**

ಇಲ್ಲಾ

**ಕೆ.ಆರ್. ಗೌಡ್ರ**
ಪಿ.ಆರ್.1795 ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ
ಬಿಜಾಪೂರ ಜಿಲ್ಲೆ. ಬಿಜಾಪೂರ.

**ಪ್ರಾಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು (ಇ.ಐ.ಬಿ.) ಬಿಜಾಪೂರ ಜಿಲ್ಲೆ, ಬಿಜಾಪೂರ ಇವರ ನ್ಯಾಯಾಲಯ**

**ಪಿರ್ಯಾಧಿದಾರರು:** ಶ್ರೀ ಎಂ.ಬಿ. ಹಳ್ಳದಮನಿ,
ಅಬಕಾರಿ ನಿರೀಕ್ಷಕರು, ಬಿಜಾಪೂರ ಉಪ ವಿಭಾಗ, ಬಿಜಾಪೂರ.
**ಪ್ರಥಮ ಮಾಹಿತಿ ಸಂ:** 04/2005-06, ದಿನಾಂಕ: 21.08.2005.
**ಆರೋಪಿತರು:** ಪರಾರಿಯಾಗಿರುತ್ತಾರೆ.

**ಪ್ರಸ್ತಾವನೆ:-**

ದಿ: 21-08-2005 ರಂದು ಮಧ್ಯಾಹ್ನ 01-00 ಗಂಟೆಗೆ ಅಬಕಾರಿ ನಿರೀಕ್ಷಕರು ಬಿಜಾಪೂರ ಉಪ ವಿಭಾಗ ಇವರ ಸಿಬ್ಬಂಧಿಯೊಂದಿಗೆ ಬ.ಬಾಗೇವಾಡಿ ತಾಲೂಕಿನ ಅರಳದಿನ್ನಿಯ ಹತ್ತಿರ ರಾಷ್ಟ್ರೀಯ ಹೆದ್ದಾರಿ 13 ರ ಬದಿಯಲ್ಲಿರುವ ಪಂಟ್ರೋಲ್ ಬಂಕ್ ಹತ್ತಿರ ರಸ್ತೆ ಕಾವಲು ಮಾಡುತ್ತಿರುವಾಗ, ಅತ್ತ ಕಡೆಯಿಂದ ಒಂದು ಅಟೋರೀಕ್ಷಾ ಅರಳದಿನ್ನಿ ಕಡೆಗೆ ಬರುವುದು ಕಾಣಿಸಿತು, ಅಟೋರೀಕ್ಷದಲ್ಲಿ ಇದ್ದ ವ್ಯಕ್ತಿಯು ಸಮವಸ್ತ್ರದಲ್ಲಿದ್ದ

ಅಬಕಾರಿ ಸಿಬ್ಬಂಧಿ ಜನರನ್ನು ಕಂಡು ಆಟೋರೀಕ್ಷಾ ಬಿಟ್ಟು ಓಡಿ ಹೋದನು ಅವನನ್ನು ಹಿಡಿಯಲು ಅಬಕಾರಿ ಸಿಬ್ಬಂಧಿಗಳು ಪ್ರಯತ್ನಿಸಿದರು ಸಿಕ್ಕಿರುವುದಿಲ್ಲಾ, ತದನಂತರ ಅಬಕಾರಿ ಸಿಬ್ಬಂಧಿ ಜನರು ಮರಳಿ ಬಂದು ಆಟೋರೀಕ್ಷಾವನ್ನು ಪರಿಶೀಲನೆ ಮಾಡಲಾಗಿ ಅದರಲ್ಲಿ ಒಂದು ಗೂಬ್ಬರ ಚೀಲವಿದ್ದು ಅದನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಘಾಟವಾಸನೆಯ 200ಎಂಎಲ್‌ದ 115 ಕಳ್ಳಭಟ್ಟಿ ಸಾರಾಯಿ ಪಾಕೀಟಗಳು ಇದ್ದವು. ತದನಂತರ ಆಟೋರೀಕ್ಷಾದ ನಂಬರ ಪರಿಶೀಲನೆ ಮಾಡಿ ನೋಡಲಾಗಿ ಸದರಿ ಆಟೋರೀಕ್ಷಾದ ನೋಂದಣಿ ಸಂಖ್ಯೆ: ಕೆಎ-28-7682, ಚೆಸ್ಸಿ ನಂಬರ:F.C.C.058134 ಮತ್ತು ಇಂಜಿನ ನಂಬರ:RZC. 68231 ಇರುವುದು ಅಂತಾ ತಿಳಿಸಿ ಸದರಿ ಗೊಬ್ಬರ ಇಚೀಲದಲ್ಲಿದ್ದ ಕಳ್ಳಭಟ್ಟಿ ಸಾರಾಯಿ ಪಾಕೀಟಗಳಿಂದ 200 ಎಂಎಲ್‌ದ ಒಂದು ಕಳ್ಳಭಟ್ಟಿ ಸಾರಾಯಿ ಪಾಕೀಟನ್ನು ರಸಾಯನ ಪರೀಕ್ಷೇಗಾಗಿ ತೆಗೆದುಕೊಂಡು ಶೀಲ ಮಾಡಿ ಪಂಚರ ಹಾಗೂ ಅಬಕಾರಿ ನಿರೀಕ್ಷಕರು ಇವರ ಸಹಿ ಚೀಟಿಗಳನ್ನು ಅಂಟಿಸಿ ನಂತರ ಮುದ್ದೇಮಾಲನ್ನು ಹಾಗೂ ಆಟೋರೀಕ್ಷಾವನ್ನು ಮುಂಇದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು ತಮ್ಮ ತಬಾಕ್ಕೆ ತೆಗೆದುಕೊಂಡು ಘಟನೆ ನಡೆದ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆ ಕ್ರಮ ಜರುಗಿಸಿರುತ್ತಾರೆ ನಂತರ ಗುನ್ನೆ ನಂ 04/2005-06 ನ್ನು ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ಪೀರ್ಯಾಧಿಯೊಂದಿಗೆ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ನಂತರ ಮುಂದಿನ ತನಿಖೆಗೋಸ್ಕರ ಸದರಿ ಪ್ರಕರಣವನ್ನು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ.ಬಾಗೇವಾಡಿ ಇವರಿಗೆ ಹಸ್ತಾಂತರ ಮಾಡಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ.ಬಾಗೇವಾಡಿ ಅವರು ಸಲ್ಲಿಸಿದ ವರದಿಗಳನ್ನು ಪರಿಶೀಲನೆ ಮಾಡಲಾಗಿ ರಸಾಯನಿಕ ತಜ್ಞರ ವರದಿ ಸಂ: CCL. 5525/2005 ದಿನಾಂಕ:-28-09-2005 ರಲ್ಲಿ ಜಪ್ತ ಮಾಡಿದ ಕಳ್ಳಭಟ್ಟಿ ಸಾರಾಯಿಯಲ್ಲಿ ಮದ್ಯಸಾರದ ಅಂಶ ಇದ್ದು ಇದು "ಮಾನವನ ಸೇವನೆಗೆ ಯೋಗ್ಯ ಇರುವುದಿಲ್ಲಾ" ಅಂತಾ ನಮೂದಿಸಿರುತ್ತಾರೆ. ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪೂರ ಇವರ ವರದಿ ದಿನಾಂಕ:-03-09-2005 ರಲ್ಲಿ ಆಟೋರೀಕ್ಷಾ ನೋಮದಣಿ ಸಂಖ್ಯೆ:ಕೆಎ-28-7682ರ ವಾಹನದ ಮಾಲೀಕರ ಹೆಸರು ಶ್ರೀ.ಬಾವಸಾಹೇಬ ರಾಜಾಸಾಹೇಬ. ಬೆನ್ನಿ ಸಾ!!ಆಲಮಟ್ಟಿ (ಆರ್‌ಎಸ್) ತಾ!!ಬ.ಬಾಗೇವಾಡಿ ಜಿ!!ಬಿಜಾಪೂರ ಅಂತಾ ನಮೂದಿಸಿರುತ್ತಾರೆ. ಸದರಿ ಆಟೋರೀಕ್ಷಾ ಸಂ:ಕೆಎ-28-7682ನ್ನು ಅಕ್ರಮವಾಗಿ ಕಳ್ಳಭಟ್ಟಿ ಸಾಗಾಣಿಕೆ ಮಾಡುವದರಲ್ಲಿ ತೊಡಗಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಪ್ರಕಾರ ಜಪ್ತ ಮಾಡಿದ ವಾಹನ ಮತ್ತು ಮುದ್ದೇಮಾಲನ್ನು ನಿಯಮಗಳ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುತ್ತದೆ.

ಆದ್ದರಿಂದ ಈ ಪ್ರಕ್ರಿಯೆ ಮಾಡುವ ಮುನ್ನ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳುವ ನೋಟಿಸ್ ನೀಡಿ ನಂತರ ಪ್ರಕರಣದಲ್ಲಿ ಜಪ್ತ ಪಡಿಸಿದ ಮುದ್ದೇಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಕಾರಣ ಕೇಳುವ ನೋಟಿಸನ್ನು ಹೊರಡಿಸಲಾಗಿದೆ.

**ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ಪ್ರಕಾರ ಕಾರಣ ಕೇಳುವ ನೋಟಿಸು**

**ಸಂಖ್ಯೆ: ಇಎಕ್ಸ್‌ಇ:ಸಿಆರ್‌ಎಂ: ಡಿಟಿಸಿಆರ್:27/2005-06 ದಿನಾಂಕ:-20ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಪರಿಶೀಲಿಸಲಾಗಿ ನಾನು ಕೆ.ಆರ್.ಗೌಡ್ರ ಅಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಆದ ನಾನು ಆಟೋರೀಕ್ಷಾ ಸಂಖ್ಯೆ ಕೆಎ-28-7682ದ ಮಾಲೀಕರಾದ ನೀವು ಅಂದರೆ ಬಾವಸಾಹೇಬ. ರಾಜಾಸಾಹೇಬ. ಬೆನ್ನಿ ಸಾ!!ಆಲಮಟ್ಟಿ ನಿಮಗೆ ತಿಳಿಯಪಡಿಸುವುದೇನೆಂದರೆ ದಿನಾಂಕ:-21-08-2005 ರಂದು ಸದರಿ ಆಟೋರೀಕ್ಷಾದಲ್ಲಿ ಅಕ್ರಮ ವಾಗಿ ಕಳ್ಳಭಟ್ಟಿ ಸಾರಾಯಿ ಪಾಕೀಟಗಳನ್ನು ಸಾಗಾಣಿಕೆ ಮಾಡುತ್ತಿರುವ ಅಪರಾಧ ವೆಸಗಿದ ಪ್ರಯುಕ್ತ ಅಬಕಾರಿ ನಿರೀಕ್ಷಕರು ಬಿಜಾಪೂರ ಉಪ ವಿಭಾಗ ಬಿಜಾಪೂರ ಇವರು ಗುನ್ನೆ ನಂ:04/2005-06 ರಲ್ಲಿ ಸದರಿ ವಾಹನವನ್ನು ಮತ್ತು ಕಳ್ಳಭಟ್ಟಿ ಸಾರಾಯಿಯ ಪಾಕೀಟಗಳನ್ನು ಜಪ್ತ ಮಾಡಿ ಪ್ರಕರಣವನ್ನು ದಾಖಲಿಸಿರುತ್ತಾರೆ. ಕಾರಣ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಪ್ರಕಾರ ನಿಮ್ಮ ವಾಹನವನ್ನು ಕರ್ನಾಟಕ ರಾಜ್ಯ ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬುದರ ಬಗ್ಗೆ ನಿಮ್ಮ ತಕರಾರು ಅಥವಾ ನಿರಪರಾಧಿಗಳೆಂದು ನಿರೂಪಿಸಲು ತಾವಾಗಲೀ ಅಥವಾ ತಾವು ನಿಯೋಜಿಸಿದ ನ್ಯಾಯವಾದಿಗಳಾಗಲೀ ಈ ಕಾರಣ ಕೇಳುವ ನೋಟಿಸು ತಲುಪಿದ ಏಳು (7) ದಿನಗಳ ಒಳಗಾಗಿ ಈ ಪ್ರಾಧಿಕಾರಕ್ಕೆ ಲಿಖಿತವಾದ ಹೇಳಿಕೆ ಮತ್ತು ದಾಖಲಾತಿಗಳನ್ನು ಹಾಜರಪಡಿಸತಕ್ಕದ್ದು. ಮತ್ತು ತಮಗೆ ಈ ಪ್ರಕರಣದಲ್ಲಿ ವಿಚಾರಣೆ ಮಾಡುವ ಇರಾದೇ ಇದೆಯೇ? ಅಥವಾ ಇಲ್ಲಾ ಎಂಬುದರ ಬಗ್ಗೆ ಕೂಡ ನಿಗದಿತ ಅವಧಿಯೊಳಗೆ ಈ ಪ್ರಾಧಿಕಾರಕ್ಕೆ ಲಿಖಿತ ಮೂಲಕ ತಿಳಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿ ಒಳಗಾಗಿ ನಿಮ್ಮಿಂದ ಸೂಕ್ತ ವಿವರಣೆ ಸೂಕ್ತ ಸಮಜಾಯಿಸಿ ಬರದೇ ಇದ್ದಲ್ಲಿ ನಿಮ್ಮ ಹೇಳಿಕೆ ಎನೂ ಇಲ್ಲವೆಂದು ಭಾವಿಸಿ ಈ ಪ್ರಕರಣದಲ್ಲಿ ಜಪ್ತ ಪಡಿಸಿದ ಆಟೋರೀಕ್ಷಾ ನೋಂದಣಿ ಸಂ:ಕೆಎ-28-7682ನ್ನು ಮತ್ತು ಜಪ್ತ ಪಡಿಸಿದ ಮುದ್ದೇಮಾಲನ್ನು (ಶ್ಯಾಂಪಲ ಪಾಕೀಟ್‌ಗಳನ್ನು ಹೊರತುಪಡಿಸಿ) ಎಕಪಕ್ಷೀಯವಾಗಿ ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲೆಗಳ ಆಧಾರದ ಮೇಲೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಮತ್ತು (ಸಿ) ಪ್ರಕಾರ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶವನ್ನು ನೀಡಲಾಗುವುದು ತಡವಾಗಿ ಬಂದ ಅರ್ಜಿಗಳಾಗಲೀ ಅಥವಾ ವಿವರಣೆಯಾಗಲೀ ಪರಿಗಣಿಸಲಾಗುವುದಿಲ್ಲಾವೆಂದು ತಿಳಿಯತಕ್ಕದ್ದು.

ಈ ಕಾರಣ ಕೇಳುವ ನೋಟಿಸನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ಪ್ರಕಾರ ದಿನಾಂಕ:-20-10-2005 ರಂದು ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ನನ್ನ ಸಹಿ ಮತ್ತು ಮೊಹರು ಹಾಕಿ ಹೊರಡಿಸಲಾಗಿದೆ.

**ಕೆ.ಆರ್. ಗೌಡ್ರ**

ಪಿ.ಆರ್.1799 ಅಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು (ಇ.ಐ.ಬಿ)

ಬಿಜಾಪೂರ ಜಿಲ್ಲೆ. ಬಿಜಾಪೂರ.

**ಪ್ರಾಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ ಇವರ ನ್ಯಾಯಾಲಯ**

**ಸಂಖ್ಯೆ: ಇಎಕ್ಸ್‌ಇ:ಸಿಆರ್‌ಎಂ:ಇ.ಐ.ಬಿ.:ಡಿಟಿಸಿಆರ್:03/2005-06 ದಿನಾಂಕ:-11ನೇ ಜುಲೈ 2005**

**ಪಿರ್ಯಾಧಿದಾರರು:** ವಿಶ್ವನಾಥ್ ವಾಯ ಎನ್.,
ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ, ಬ.ಬಾಗೇವಾಡಿ.

**ಆರೋಪಿತರು:** ಪರಾರಿಯಾಗಿರುತ್ತಾರೆ.

**ಪ್ರಸ್ತಾವನೆ:**

ದಿ:11-07-2005 ರಂದು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ.ಬಾಗೇವಾಡಿ ತಾಲೂಕು ಇವರು ಬಾತ್ಮಿ ಬಂದ ಪ್ರಯುಕ್ತ ಸಾಯಂಕಾಲ 5-30 ಗಂಟೆಗೆ ಬ.ಬಾಗೇವಾಡಿ ತಾಲೂಕಿನ ತಳೆವಾಡದಿಂದ ಕಲಗುರ್ಕಿಗೆ ಹೋಗುವ ರಸ್ತೆಯಲ್ಲಿ ರಸ್ತೆ ಕಾವಲು ಮಾಡುತ್ತಿರುವಾಗ, ಇಬ್ಬರು ಜನರು ದ್ವಿಚಕ್ರವಾಹನದಲ್ಲಿ ಕಲಕುರ್ಕಿ ಕಡೆಯಿಂದ ತಳೆವಾಡದತ್ತ ಬರುತ್ತಿರುವಾಗ ದೂರದಿಂದ ಸಮವಸ್ತ್ರದಲ್ಲಿದ್ದ ಸಿಬ್ಬಂಧಿ ಜನರನ್ನು ಕಂಡು ಗಾಬರಿಯಾಗಿ

ದ್ವಿಚಕ್ರವಾಹನವನ್ನು ಅಲ್ಲಿಯೇ ಬಿಟ್ಟು ಪರಾರಿಯಾಗಿರುತ್ತಾರೆ. ಆಗ ಸಿಬ್ಬಂಧಿ ಜನರು ಸಂಶಯ ಬಂದು ದ್ವಿಚಕ್ರವಾಹನ ಬಿದ್ದ ಜಾಗದಲ್ಲಿ ಬಂದು ನೋಡಿದಾಗ ಅಲ್ಲಿ ಒಂದು ಬಿಳಿಯ ಬಣ್ಣದ ಪ್ಲಾಸ್ಟಿಕ್ ಚೀಲ ಇದ್ದಿದ್ದು ಸದರಿ ಚೀಲದಲ್ಲಿ ಒಂದು ಬಿಳಿಯ ಟ್ಯೂಬದಲ್ಲಿ ಸುಮಾರು 45 ಲೀಟರ್‌ರಷ್ಟು ಕಳ್ಳಭಟ್ಟಿ ಸಾರಾಯಿ ಇದ್ದು. ಅದು ಕಗ್ಗವ ಹುಳುಚು ವಾಸನೆ ಇದ್ದದ್ದರಿಂದ ಟ್ಯೂಬನಿಂದ 180ಎಂಎಲ್‌ದ ಬಾಟಲಿಯಲ್ಲಿ ರಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಬಾಟಲಿ ಮತ್ತು ಟ್ಯೂಬ ಶೀಲ ಮಾಡಿ ಪಂಚರ ಸಹಿ ಇರುವ ಚೀಟಿ ಅಂಟಿಸಿರುತ್ತಾರೆ ಪಕ್ಕದಲ್ಲಿ ಬಿದ್ದಿದ ದ್ವಿಚಕ್ರವಾಹನವನ್ನು ಪರಿಶೀಲಿಸಿ ನೋಡಲಾಗಿ ಅದು ಸುಜುಕಿ ಸಮುರೈ ಕಂಪನಿಯದಾಗಿದ್ದು ಅದರ ನಂ:ಕೆಎ:28:ಜೆ:0092 ಇರುತ್ತದೆ. ಮತ್ತು ಚೆಸ್ಸಿ ನಂ:ಯು-18-ಎಫ್-970551 ಇರುತ್ತದೆ ಎಂದು ತಿಳಿಸಿ. ಅಬಕಾರಿ ಗುನ್ನೆ ನಂ:01/2005-06 ರಲ್ಲಿ ಮೊಕದ್ದಮೆ ದಾಖಲಿಸಿ ನ್ಯಾಯಾಲಯಕ್ಕೆ ಸರ್ಕಾರಿ ತರ್ಫೆ ಫಿರ್ಯಾಧಿ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಲಾದ ವಾಹನದ ಮಾಲೀಕರ ಹೆಸರು ಮತ್ತು ವಿಳಾಸ ಪಡೆಯಲು ಪ್ರಾಧೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪೂರ ಇವರಿಂದ (ಬಿ-ಎಕ್ಸಟ್ರಾ ಕ್ಟ್ರ) ಪಡೆದು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ಸದರಿ ವಾಹನ ಸಂ:ಕೆಎ-28-ಜೆ-0092 ಶ್ರೀರಂಗಪ್ಪ ರೂಪಲು ಜಾಧವ ಸಾ!!ಮುಳವಾಡ ತಾ!!ಬ.ಬಾಗೇವಾಡಿ ಎಂದು ಸದರಿ ಬಿ-ಎಕ್ಸಟ್ರಾ ಕ್ಟನಲ್ಲಿ ದೃಡಪಟ್ಟಿರುತ್ತದೆ.

ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ.ಬಾಗೇವಾಡಿ ಇವರು ಸದರಿ ಪ್ರಕರಣದಲ್ಲಿ ಜಪ್ತು ಪಡಿಸಿದ ಕಳ್ಳಭಟ್ಟಿ ಸಾರಾಯಿ ಮಾದರಿಯನ್ನು ರಸಾಯನಿಕ ವಿಶ್ಲೇಷಣೆಗಾಗಿ ರಸಾಯನಿಕ ತಜ್ಞರಿಗೆ ಕಳುಹಿಸಿಕೊಟ್ಟಿದ್ದು ಸದರಿ ರಸಾಯನಿಕ ಮಾದರಿ ಮದ್ಯಸಾರದ ಅಂಶವು ಇದ್ದು ಇದು **"ಮಾನವನ ಸೇವನೆಗೆ ಯೋಗ್ಯ ಇರುವುದಿಲ್ಲಾ"** ಅಂತಾ ರಸಾಯನಿಕ ತಜ್ಞರು ದೃಡಿಕರಿಸಿ ವರದಿ ನೀಡಿರುತ್ತಾರೆ.

ದಿನಾಂಕ:-24-08-2005 ರಂದು ಈ ಪ್ರಾಧಿಕಾರದಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಕಾರಣ ಕೇಳುವ ನೋಟಿಸನ್ನು ವಾಹನ ಮಾಲೀಕರಾದ ಶ್ರೀ ರಂಗಪ್ಪ ರೂಪಲು ಜಾಧವ ಸಾ!!ಮುಳವಾಡ ತಾ!!ಬ.ಬಾಗೇವಾಡಿ ಇವರಿಗೆ ನೋಟಿಸು ಹೊರಡಿಸಲಾಯಿತು. ಸದರಿ ನೋಟಿಸನ್ನು ವಾಹನದ ಮಾಲೀಕರಿಗೆ ದಿನಾಂಕ:-31-08-2005 ರಂದು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ.ಬಾಗೇವಾಡಿ ಇವರು ಜಾರಿ ಮಾಡಿರುತ್ತಾರೆ. ದಿನಾಂಕ:-06-09-2005 ರಂದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ಕಲಂ 43 (ಎ) ಪ್ರಕಾರ ಈ ಪ್ರಾಧಿಕಾರವು ದಿನಾಂಕ:-19-09-2005 ರಂದು ವಿಚಾರಣೆ ನಡೆಸಲಾಗುವುದೆಂದು ಎಲ್ಲ ಸಾಕ್ಷಿದಾರರಿಗೆ ಮತ್ತು ಮಾಲೀಕರಿಗೆ ನೋಟಿಸು ತೆಗೆಯಲಾಯಿತು.

ದಿನಾಂಕ:-19-09-2005 ರಂದು ವಿಚಾರಣೆಯನ್ನು ನಡೆಸಲಾಯಿತು ಅಭಿಯೋಗದ ಪರವಾಗಿ ಸಹಾಯಕ ಅಭಿಯೋಗದ ನಿರ್ದೇಶಕರು ಬಿಜಾಪೂರ ಇವರು ಹಾಜರಿ ಇದ್ದು ಅಭಿಯೋಗದ ಪರವಾಗಿ ಸಾಕ್ಷಿದಾರರಾದ ್ಲ ಪ್ರ.ಸಾ-1, ಪ್ರಾ.ಸಾ-2 ವಿಚಾರಣೆ ಮಾಡಿ ನಾಲ್ಕು (4) ದಾಖಲಾತಿಗಳನ್ನು ಮತ್ತು ಎರಡು ಮುದ್ದೇಮಾಲುಗಳನ್ನು ಗುರುತಿಸಿದ್ದು ಇರುತ್ತದೆ.

ಪ್ರಾ.ಸಾ-1 ಇವರು ಸಾಕ್ಷಿ ನುಡಿಯುತ್ತಾ ದಿನಾಂಕ:-11-07-2005 ರಂದು ಸಾಯಂಕಾಲ ತಳೆವಾಡದಿಂದ ಕಲಕುರ್ಕಿ ಕಡೆಗೆ ಹೋಗುವ ರಸ್ತೆಯಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಮಾಡುತ್ತಿದ್ದ ಸುಜುಕಿ ಸಮೊರಾಯಿ ದ್ವಿಹಚಕ್ರ ವಾಹನ ಸಂ:ಕೆಎ:28:ಜೆ:0092 ನ್ನು ಮತ್ತು ಟ್ಯೂಬ್‌ನಲ್ಲಿ ಇದ್ದ 45ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ಜಪ್ತು ಮಾಡಿದ್ದು, ಆ ಸಮಯದಲ್ಲಿ ಆರೋಪಿತರನ್ನು ಹಿಡಿಯಲು ಪ್ರಯತ್ನಿಸಲಾಗಿ ಆರೋಪಿತರು ಪರಾರಿಯಾಗಿರುತ್ತಾರೆ, ನಂತರ ಪಂಚರ ಸಮಕ್ಷಮ ರಸಾಯನ ಪರೀಕ್ಷೆಗೋಸ್ಕರ ಸದರಿ ಟ್ಯೂಬ್‌ನಿಂದ 180ಮಿಲಿಯ ಬಾಟಲಿಯಲ್ಲಿ ಕಳ್ಳಭಟ್ಟಿ ಸಾರಾಯಿಯನ್ನು ತೆಗೆದು ಅವರ ಕಛೇರಿಯ ಶೀಲಿನಿಂದ ಶೀಲು ಮಾಡಿ ನಂತರ ಪಂಚರ ಹಾಗೂ ಸದರಿ ಅಧಿಕಾರಿಗಳ ಸಹಿ ಮಾಡಿದ ಚೀಟಗಳನ್ನು ಮಾದರಿಯಾಗಿ ತೆಗೆದ ಬಾಟಲಿಗೆ ಅಂಟಿಸಲಾಯಿತು ನಂತರ ಸ್ಥಳದಲ್ಲಿ ಪಂಚನಾಮ ಮಾಡಿ ಗುನ್ನೆ ನಂ:1/2005 06 ದಾಖಲಿಸಿ, ಪ್ರಥಮ ವರ್ತಮಾನ ವರದಿ ಮತ್ತು ಪಂಚನಾಮೆಯನ್ನು ಪಿರ್ಯಾಧಿಯೊಂದಿಗೆ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ ಬ.ಬಾಗೇವಾಡಿ ಅವರಿಗೆ ಸಲ್ಲಿಸಲಾಯಿತು. ಮಾಲು ಜಪ್ತು ಪಂಚನಾಮೆಯನ್ನು ಹಾಗೂ ಅವರ ಪೀರಾದ್ಯ ಪ್ರತಿ ಮತ್ತು ರಸಾಯನಿಕ ತಜ್ಞರ ವಿಶ್ಲೇಷಣಾ ವರದಿ ಈಗ ನೋಡುತ್ತಿದ್ದು ಅವುಗಳನ್ನು ಅನುಕ್ರಮವಾಗಿ ನಿಶಾನೆ-ಪಿ1 ರಿಂದ ಪಿ-3 ಎಂದು ಗುರುತಿಸಲಾಯಿತು. ಮತ್ತು ಪಂಚನಾಮ ಹಾಗೂ ಪೀರ್ಯಾಧಿಯಲ್ಲಿರುವ ಸಹಿಯನ್ನು ನೋಡುತ್ತಿದ್ದು ಅದನ್ನು ನಿಶಾನೆ ಪಿ-1(ಎ) ಮತ್ತು ಪಿ-2(ಎ) ಎಂದು ಗುರುತಿಸಲಾಯಿತು. ಈ ಪ್ರಕರಣಕ್ಕೆ ಸಂಬಂಧಿಸಿದ ಪ್ರಥಮ ವರ್ತಮಾನ ವರದಿಯನ್ನು ನೋಡುತ್ತಿದ್ದು ಅದನ್ನು ನಿಶಾನೆ ಪಿ-4 ಎಂದು ಮತ್ತು ಅದರಲ್ಲಿಯ ಸಹಿಯನ್ನು ನಿಶಾನೆ-4(ಎ) ಎಂದು ಗುರುತಿಸಲಾಯಿತು. ಶ್ಯಾಂಪಲ ಬಾಟಲಿಯನ್ನು ಹಾಗೂ ಜಪ್ತು ಮಾಡಿದ ವಾಹನವನ್ನು ನೋಡುತ್ತಿದ್ದು ಅವುಗಳನ್ನು ಮುದ್ದೇಮಾಲು-1 ಮತ್ತು 2 ಎಂದು ಗುರುತಿಸಲಾಯಿತು. ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲಾ. ಸಾಕ್ಷಿದಾರರ ಸಾಕ್ಷಿ ಹೇಳುವ ಸಮಯದಲ್ಲಿ ವಾಹನ ಮಾಲೀಕರು ಇಲ್ಲದಿದ್ದರಿಂದ ಪಾಟಿ ಸವಾಲು ಇಲ್ಲವೆಂದು ಪರಿಗಣಿಸಲಾಯಿತು. ಸಾಕ್ಷಿದಾರರ ಹೇಳಿಕೆಯನ್ನು ಹಾಗೂ ವಾಹನದ ಮಾಲೀಕರ ಗೈರಹಾಜರಾತಿಯನ್ನು ಪರಿಶೀಲಿಸಲಾಗಿ ಸದರಿ ವಾಹನ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಲ್ಲಿ ತೊಡಗಿರುವುದಕ್ಕೆ ಪುಷ್ಠಿ ನೀಡುತ್ತದೆ.

ಪ್ರಾ.ಸಾ-2 ಇವರು ಪಂಚ ಸಾಕ್ಷಿದಾರರಾಗಿದ್ದು. ಸಾಕ್ಷಿ ನುಡಿಯುತ್ತಾ ದಿನಾಂಕ:-11-07-2005 ರಂದು ಸಾಯಂಕಾಲ 5-30 ಗಂಟೆಗೆ ತಳೇವಾಡ ಕಲಕುರ್ಕಿ ರಸ್ತೆಯಲ್ಲಿ ಕಲಕುರ್ಕಿ ಕಡೆಯಿಂದ ಒಂದು ಮೋಟಾರ ಸೈಕಲ್ ಬರುವುದನ್ನು ಕಂಡು ಅಬಕಾರಿ ಅಧಿಕಾರಿಗಳು ರಸ್ತೆ ಮೇಲೆ ಬಂದು ನಿಲ್ಲಿಸಲು ಕೈ ಮಾಡುತ್ತಿದ್ದಾಗ ಅಬಕಾರಿ ಅಧಿಕಾರಿಗಳನ್ನು ಕಂಡು ಸದರಿ ಮೋಟಾರ ಸೈಕಲಿನ ಚಾಲಕರು ವಾಹನವನ್ನು ಬಿಟ್ಟು ಓಡಿ ಹೋದರು ನಂರತ ಅಬಕಾರಿ ಅಧಿಕಾರಿಗಳು ವಾಹನ ಹತ್ತಿರ ಇರುವ ಬಿಳಿ ಚೀಲವನ್ನು ಪರಿಶೀಲಿಸಲಾಗಿ ಅದರಲ್ಲಿ ಕಳ್ಳಭಟ್ಟಿ ಸಾರಾಯಿ ಇರುವ ರಬ್ಬರ ಟ್ಯೂಬ ಇದ್ದದು ಕಂಡು ಬಂತ್ತು. ನಂತರ ನಮ್ಮ ಸಮಕ್ಷಮ ಅಬಕಾರಿ ಅಧಿಕಾರಿಗಳು ಸದರಿ ಬಿಳಿ ಚೀಲದಲ್ಲಿರುವ ಟ್ಯೂಬನಲ್ಲಿಯ ಶ್ಯಾಂಪಲ ಕುರಿತು 180 ಮಿಲಿಯ ಬಾಟಲಿಯಲ್ಲಿ ಸದರಿ ಕಳ್ಳಬಟ್ಟಿ ಸಾರಾಯಿಯನ್ನು ತೆಗೆದು ತಮ್ಮ ಕಛೇರಿಯ ಶೀಲಿನಿಂದ ಶೀಲ ಮಾಡಿ ನಮ್ಮ ಹಾಗೂ ಅಬಕಾರಿ ಅಧಿಕಾರಿಗಳ ಸಹಿ ಮಾಡಿದ ಚೀಟಿಗಳನ್ನು ಸದರಿ ಮಾದರಿ ಬಾಟಲಿಗೆ ಅಂಟಿಸಿ ಪಂಚನಾಮೆ ಬರೆದು ವಾಹನ ಸಂ:ಕೆಎ 28 ಜೆ 0092 ಮತ್ತು ಕಳ್ಳಭಟ್ಟಿ ಸಾರಾಯಿಯನ್ನು ಅಬಕಾರಿ ಅಧಿಕಾರಿಗಳು ಪಂಚನಾಮ ಅನುಸಾರ ತಮ್ಮ ವಶಕ್ಕೆ ತೆಗೆದುಕೊಂಡರು. ಸದರಿ ಪಂಚನಾಮೆಯ ನಕಲು ಪ್ರತಿಯನ್ನು ಈಗ ನೋಡುತ್ತದ್ದು ಅದರಲ್ಲಿರುವ ತನ್ನಸಹಿಯನ್ನು ಗುರುತಿಸಿದನು ಅದಕ್ಕೆ ನಿಶಾನೆ ಪಿ 1(ಬಿ) ಎಂದು ಗುರುತಿಸಲಾಯಿತು. ಈಗ ನೋಡುತ್ತಿದ್ದ ರಸಾಯನ ಮಾದರಿ ಮತ್ತು ಮುದ್ದೇಮಾಲನು- 1 ಮತ್ತು 2 ಗುರುತಿಸಲಾಯಿತು. ಸದರಿ ಸಾಕ್ಷಿದಾರ ಹೇಳಿಕೆಯ ಸಮಯದಲ್ಲಿ ವಾಹನ ಮಾಲೀಕರು ಇಲ್ಲದ್ದರಿಂದ ಪಾಟಿ ಸವಾಲ ಇಲ್ಲವೆಂದು ಪರಿಗಣಿಸಲಾಯಿತು. ಈ ಪಂಚ ಸಾಕ್ಷಿದಾರನು ಅಭಿಯೋಗದ ಪರವಾಗಿ ಸಾಕ್ಷಿ ನುಡಿದಿದ್ದರಿಂದ ವಾಹನವು ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಮಾಡುವುದರಲ್ಲಿ ತೊಡಗಿರುವುದಕ್ಕೆ ಪುಷ್ಠಿ ನೀಡುತ್ತದೆ.

ಮೇಲ್ಕಾಣಿಸಿದ ಅಂಶಗಳನ್ನು ಪರಿಶೀಲಿಸಲಾಗಿ ಸದರಿ ದ್ವಿಚಕ್ರ ವಾಹನ ಸಮೊರಾಯಿ ಸುಜುಕಿ ಸಂ:ಕೆಎ 28 ಜೆ 0092 ರಲ್ಲಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಮಾಡುತ್ತಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ.ಬಗೇವಾಡಿ ಇವರು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿ ಸದರಿ ವಾಹನವು ತನ್ನದೆಂದು ಮಾಲೀಕತ್ವದ ಬಗ್ಗೆ ಯಾರು ಮುಂದೆ ಬಂದಿರುವುದಿಲ್ಲಾ, ಮತ್ತು ಸದರಿ ವಾಹನವನ್ನು ಕಛೇರಿಯ ಆವರಣದಲ್ಲಿ ನಿಲ್ಲಿಸಿರುವುದರಿಂದ ವಾತವರಣದ ವೈಪರೀತ್ಯದಿಂದ ಮೌಲ್ಯವನ್ನು ಕಳೆದುಕೊಳ್ಳುವ ಸಾಧ್ಯತೆಗಳು ಇರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ತಿಳಿಸಿರುತ್ತಾರೆ. ಮತ್ತು ರಸಾಯನಿಕ ತಜ್ಞರು ಸದರಿ ಪ್ರಕರಣದಲ್ಲಿ ಜಪ್ತು ಪಡಿಸಿದ ಭಟ್ಟಿ ಸಾರಾಯಿಯು ಮದ್ಯಸಾರದ ಅಂಶವಿದ್ದು ಇದು ಮಾನವ ಸೇವನೆಗೆ ಯೋಗ್ಯ ಇರುವುದಿಲ್ಲಾ ಅಂತಾ ದೃಢಪಡಿಸಿರುತ್ತಾರೆ. ಹಾಗೂ ವಾಹನದ ಮಾಲೀಕರಿಗೆ ನೋಟಿಸ ನೀಡಿದರು ಸಹ ವಾಹನದ ಮಾಲೀಕರು ವಾಹನ ತನ್ನದೆಂದು ಮಾಲೀಕತ್ವದ ಹಕ್ಕನ್ನು ಸ್ಥಾಪಿಸಲು ಈ ಪ್ರಾಧಿಕಾರದ ಮುಂದೆ ಬಂದು ಹಾಜರಾಗಿರುವುದಿಲ್ಲಾ. ಈ ಮೇಲಿನ ಅಂಶಗಳನ್ನು ಪರಿಶೀಲಿಸಿಲಾಗಿ ಸದರಿ ವಾಹನವನ್ನು ತಿಳುವಳಿಕೆಯಿಂದಲೇ ಕಾನೂನು ಬಾಹಿರ ಕೃತ್ಯದಲ್ಲಿ ಉಪಯೋಗಿಸಿರುತ್ತಾರೆಂದು ಭಾವಿಸಿಬಹುದಾಗಿರುತ್ತದೆ. ಇನ್ನೂ ಮುಂದೆ ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ಹಿತದೃಷ್ಠಿಯಿಂದ ದ್ವಿಚಕ್ರ ವಾಹನ ಸುಜಕಿ ಸುಮೊರಾಯಿ ಸಂ:ಕೆಎ:28:ಜೆ:0092 ಮತ್ತು ಮೇಲ್ಕಾಣಿಸಿದ 45 ಲೀಟರ್ ಕಳ್ಳಬಟ್ಟಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶದ ಸಂಖ್ಯೆ: ಇಎಕ್ಸ್‌ಇ:ಇ.ಐ.ಬಿ:ಡಿಟಿಸಿಆರ್:03/2005-06, ದಿನಾಂಕ: 17ನೇ ಅಕ್ಟೋಬರ್ 2005**

ಕೆ.ಆರ್.ಗೌಡ್ರ. ಪ್ರಾಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ ಬಿಜಾಪೂರ ಜಿಲ್ಲೆ. ಬಿಜಾಪೂರ ಆದ ನಾನು. ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ 43(ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ 43 (ಸಿ) ಅನ್ವಯ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ.ಬಾಗೇವಾಡಿ ಇವರ ಮೊಕದ್ದಮೆ ಸಂಖ್ಯೆ:03/2005-06 ದಿನಾಂಕ:-11-07-2005 ದಲ್ಲಿ ವಶಪಡಿಸಿಕೊಂಡಿರುವ ದ್ವಿಚಕ್ರ ವಾಹನ ಸುಜಕಿ ಸುಮೊರಾಯಿ ಸಂ:ಕೆಎ-28-ಜೆ-0092ನ್ನು ಮತ್ತು 45ಲೀಟರ ಕಳ್ಳಭಟ್ಟಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಮೇಲೆ ತಿಳಿಸಿದ 45.000ಲೀಟರ ಕಳ್ಳಭಟ್ಟಿ ಸಾರಾಯಿಯನ್ನು ಅಬಕಾರಿ ಉಪ ಅಧೀಕ್ಷಕರು ಬಿಜಾಪೂರ ಉಪ ವಿಭಾಗ ಇವರ ಸಮಕ್ಷಮ (ಶ್ಯಾಂಪಲ ಬಾಟಲಿಗಳನ್ನುಹೊರತುಪಡಿಸಿ) ನಾಶಪಡಿಸಲು ಆದೇಶಿಸಿದೆ.

ಈ ಆದೇಶವನ್ನು ಇಂದು ದಿನಾಂಕ:-17-10-2005 ರಂದು ವಿಷಯ ನಿರ್ವಾಹಕರಿಗೆ ಉತ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚಿನ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

**ಕೆ.ಆರ್. ಗೌಡ್ರ**

ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ

ಬಿಜಾಪೂರ ಜಿಲ್ಲೆ. ಬಿಜಾಪೂರ.

**ಅನುಬಂಧ (1)**

**ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

| | | |
|---|---|---|
| ಪ್ರಾ ಸಾ-1 | ವಿಶ್ವನಾಥ ವಾಯ. ಎಸ್., ಅಬಕಾರಿ ಉಪ ನಿರೀಕ್ಷಕರು<br>ಬ. ಬಾಗೇವಾಡಿ ಕಛೇರಿ ಜಾರಿ ಮತ್ತು ತನಿಖೆ. | ತನಿಖಾಧಿಕಾರಿ |
| ಪ್ರಾ ಸಾ-2 | ಮಲ್ಲಪ್ಪ ಬಸಪ್ಪ ಬಂಗಾರಿ<br>ವಯಸ್ಸು-45 ಉದ್ಯೋಗ-ಕೂಲಿ ಕೆಲಸ ವಾಸಸ್ಥಳ: ಬ.ಬಾಗವಾಡಿ | ಪಂಚರು |

**ಅನುಬಂಧ (2)**

**ಫಿರ್ಯಾಧಿದಾರರ ಪರಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ-ಪಿ-1 | ಪಂಚನಾಮೆ ದೃಡೀಕೃತ ಪತ್ರ |
| ನಿಶಾನೆ-ಪಿ-1(ಎ) | ಪ್ರಾ.ಸಾ-1 ರವರ ಸಹಿ |
| ನಿಶಾನೆ-ಪಿ-2 | ಫೀರ್ಯಾಧಿದಾರರ ವರದಿ |
| ನಿಶಾನೆ-ಪಿ-2(ಎ) | ಪ್ರಾ ಸಾ-1 ರವರ ಸಹಿ |
| ನಿಶಾನೆ-ಪಿ-3 | ರಸಾಯನಿಕ ತಜ್ಞರ ವರದಿಯ ಪ್ರತಿ |
| ನಿಶಾನೆ-ಪಿ-4 | ಪ್ರಥಮಾನ ವರದಿ |
| ನಿಶಾನೆ-ಪಿ-4 (ಎ) | ಪ್ರಾ.ಸಾ-1 ರವರ ಸಹಿ |
| ನಿಶಾನೆ-ಪಿ-1 (ಬ) | ಪಂಚನಾಮೆಯಲ್ಲಿರುವ ಪಂಚರ ಸಹಿ |

**ಅನುಬಂಧ- (3)**

**ಫೀರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

1) ಎಂ.ಓ. -1 ವಾಹನ ನಂಬರ ಸುಜಕಿ ಸುಮೊರಾಯಿ ಕೆಎ-28- ಜೆ-0092
2) ಎಂ.ಓ. -2 ಮಾದರಿ ಕಳ್ಳಭಟ್ಟಿ ಸಾರಾಯಿ ಬಾಟಲಿಗಳು

**ಅನುಬಂಧ- (4)**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು**

ಇಲ್ಲಾ.

**ಅನುಬಂಧ- (5)**

**ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು**

ಇಲ್ಲಾ

**ಕೆ.ಆರ್. ಗೌಡ್ರ**

ಪಿ.ಆರ್.1997 ಪ್ರಾಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ

ಬಿಜಾಪೂರ ಜಿಲ್ಲೆ. ಬಿಜಾಪೂರ.

**ಪ್ರಾಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ವಿಚಕ್ಷಣದಳ ಬಿಜಾಪೂರ ಜಿಲ್ಲೆ, ಬಿಜಾಪೂರ ಇವರ ನ್ಯಾಯಾಲಯ**

**ಸಂಖ್ಯೆ: ಇಎಕ್ಸ್‌ಇ:ಸಿಆರ್‌ಎಂ:ಡಿಟಿಸಿಆರ್:100/2004-05 ದಿನಾಂಕ:-24ನೇ ಅಕ್ಟೋಬರ್ 2005**

**ಉಪಸ್ಥಿತರು:**

ಶ್ರೀ ಕೆ.ಆರ್. ಗೌಡ್ರ,

ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು

ವಿಚಕ್ಷಣದಳ, ಬಿಜಾಪೂರ ಜಿಲ್ಲೆ, ಬಿಜಾಪೂರ.

**ಫಿರ್ಯಾಧಿದಾರರು :** **ವಿರುದ್ಧ** **ಅರ್ಜಿದಾರರು / ಆರೋಪಿತರು:**

ಅಬಕಾರಿ ಉಪ ನಿರೀಕ್ಷಕರು ಇ.ಐ.ಬಿ.
ಬಿಜಾಪೂರ ಜಿಲ್ಲೆ, ಬಿಜಾಪೂರ.

1) ಆರೋಪಿತರು: ಪರಾರಿಯಾಗಿರುತ್ತಾರೆ.
2) ಅರ್ಜಿದಾರರು: ಮಲ್ಲಪ್ಪ ಬಸಪ್ಪ ಬಸಳಿ, ಮಹಾತ್ಮಾಗಾಂಧಿ ಆಶ್ರಯನಗರ ಗುನ್ನಪೂರ ರಸ್ತೆ, ಬಿಜಾಪೂರ (ವಾಹನದ ಮಾಲೀಕರು)

**ಪ್ರಕರಣದ ಮುಖ್ಯಾಂಶಗಳು:**

ದಿ:04-06-2005 ರಂದು ರಾತ್ರಿ 11-00 ಗಂಟೆಗೆ ಅಬಕಾರಿ ಉಪ ನಿರೀಕ್ಷಕರು ಇ.ಐ.ಬಿ ಬಿಜಾಪೂರ ಜಿಲ್ಲೆ, ಬಿಜಾಪೂರ ಇವರ ಸಿಬ್ಬಂಧಿಯೊಂದಿಗೆ ಬಿಜಾಪೂರ ಶಹರಕ್ಕೆ ಅನಧೀಕೃತವಾಗಿ ಮದ್ಯಸಾಗಾಣಿಕೆ ಮಾಡುತ್ತಾರೆಂಬ ಖಚಿತ ಮಾಹಿತಿ ಪಡೆದುಕೊಂಡು ಬಿಜಾಪೂರ ಶಹರದಲ್ಲಿ ಹೊನಗನಹಳ್ಳಿ ರಸ್ತೆಯಲ್ಲಿರುವ ಜುಮುನಾಳ ಕ್ರಾಸ ಹತ್ತಿರ ರಸ್ತೆ ಕಾವಲು ಮಾಡುತ್ತಿರುವಾಗ, ಹೊನಗನಹಳ್ಳಿ ಕಡೆಯಿಂದ ಒಂದು ಅಟೋರೀಕ್ಷಾ ಬರುವುದು ಕಂಡು ಬಂತ್ತು, ಸದರಿ ಅಟೋರೀಕ್ಷಾದಲ್ಲಿದ್ದ ವ್ಯಕ್ತಿಯು ಸಿಬ್ಬಂಧಿ ಜನರನ್ನು ಕಂಡುಕೊಡಲೇ ಅಟೋರೀಕ್ಷಾ ಬಿಟ್ಟು ಓಡಿ ಹೋದನು ಅವನನ್ನು ಹಿಡಿಯಲು ಅಬಕಾರಿ ಸಿಬ್ಬಂಧಿಗಳು ಪ್ರಯತ್ನಿಸಿದರು ಕತ್ತಲಲ್ಲಿ ಸಿಕ್ಕಿರುವುದಿಲ್ಲಾ, ಆಗ ಸಮಯ ರಾತ್ರಿ 11-00 ಗಂಟೆ ಆಗಿತ್ತು ತದನಂತರ ಅಬಕಾರಿ ಸಿಬ್ಬಂಧಿ ಜನರು ಸದರಿ ಅಟೋರೀಕ್ಷಾವನ್ನು ಪರಿಶೀಲನೆ ಮಾಡಲಾಗಿ ಅದರಲ್ಲಿ ನಾಲ್ಕು ಪ್ಲಾಸ್ಟೀಕ್ ಚೀಲ ಇರುವುದು ಕಂಡು ಅದನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಕಳ್ಳಭಟ್ಟಿ ಸಾರಾಯಿ ಪಾಕೀಟ್‌ಗಳು ಇದ್ದವು. ಎಲ್ಲ ಪ್ಲಾಸ್ಟೀಕ ಚೀಲಗಳಲ್ಲಿಯ ಸಾರಾಯಿ ಪಾಕೀಟಗಳನ್ನು ಎಣಿಕೆ ಮಾಡಿ ನೋಡಿದರು. ಅವು 100ಎಂಎಲ್‌ದ 800 ಪಾಕೀಟಗಳು ಇರುವುದು ಕಂಡುಬಂದಿರುತ್ತದೆ. ತದನಂತರ ಅಟೋರೀಕ್ಷಾದ ನಂಬರ ಪರಿಶೀಲನೆ ಮಾಡಿ ನೋಡಲಾಗಿ ಸದರಿ ಅಟೋರೀಕ್ಷಾದ ನೋದಣಿ ಸಂಖ್ಯೆ:ಕೆಎ-28-6469, ಚೆಸ್ಸಿ ನಂಬರಿನ:AAFBGK28603 ಮತ್ತು ಇಂಜಿನ ನಂಬರ: AAMBGK 39476 ಇರುವುದು ಅಂತಾ ತಿಳಿಸಿ ಸದರಿ ನಾಲ್ಕು ಪ್ಲಾಷ್ಟೀಕ ಚೀಲಗಳಿಂದ ತಲಾ ಎರಡರಂತೆ ಒಟ್ಟು 8 ಕಳ್ಳಭಟ್ಟಿ ಸಾರಾಯಿ ಪಾಕೀಟಗಳನ್ನು ರಸಾಯನ ಪರೀಕ್ಷೆಗಾಗಿ ತೆಗೆದುಕೊಂಡು ಶೀಲಮಾಡಿ ಪಂಚರ ಹಾಗೂ ಅಬಕಾರಿ ಉಪ ನಿರೀಕ್ಷಕರು 1 ಇವರ ಸಹಿ ಚೀಟಿಗಳನ್ನು ಅಂಟಿಸಿ ಮತ್ತು ಉಳಿದ ಮುದ್ದೇಮಾಲನ್ನು ಹಾಗೂ ಅಟೋರೀಕ್ಷಾವನ್ನು ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು ತಮ್ಮ ತಬಾಕ್ಕೆ ತೆಗೆದುಕೊಂಡು ಘಟನೆ ನಡೆದ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆ ಕ್ರಮ ಜರುಗಿಸಿರುತ್ತಾರೆ ನಂತರ ಗುನ್ಹೆ ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ಮತ್ತು ಪಂಚನಾಮೆಯನ್ನು ಸರ್ಕಾರಿ ತರ್ಫೆ ಫೀರ್ಯಾಧಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಲಾದ ವಾಹನದ ಮಾಲೀಕರ ಹೆಸರು ಮತ್ತು ವಿಳಾಸ ಪಡೆಯಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪೂರ ಇವರಿಂದ (ಬಿ ಎಕ್ಸಟ್ರ್ಯಾಕ್ಟ) ಪಡೆದು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ಸದರಿ ವಾಹನ ಸಂ:ಕೆಎ-28-6469 ಶ್ರೀಮಲ್ಲಪ್ಪ ಬಸಪ್ಪ ಮಸಳಿ ಪೇಟಬಾವಡಿ ನಿಯರ ಝುಂಢಾಕಟ್ಟಿ ಜೆ.ಎಂ.ರೋಡ, ಬಿಜಾಪೂರ ಎಂದು ಸದರಿ ಬಿ ಎಕ್ಸಟ್ರ್ಯಾಕ್ಟನಲ್ಲಿ ದೃಡಪಟ್ಟಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು ವಿಚಕ್ಷಣದಳ ಬಿಜಾಪೂರ ಜಿಲ್ಲೆ ಇವರು ಸದರಿ ಪ್ರಕರಣದಲ್ಲಿ ಜಪ್ತುಪಡಿಸಿದ ಕಳ್ಳಭಟ್ಟಿ ಸಾರಾಯಿ ಮಾದರಿಯನ್ನು ರಸಾಯನಿಕ ವಿಶ್ಲೇಷಣೆಗಾಗಿ ರಸಾಯನಿಕ ತಜ್ಞರಿಗೆ ಕಳುಹಿಸಿಕೊಟ್ಟಿದ್ದು ಸದರಿ ರಸಾಯನಿಕ ಮಾದರಿ ಮದ್ಯಸಾರದ ಅಂಶವು ಇದ್ದು ಇದು **"ಮಾನವನ ಸೇವನೆಗೆ ಯೋಗ್ಯ ಇರುವುದಿಲ್ಲ"** ಅಂತಾ ರಸಾಯನಿಕ ತಜ್ಞರು ದೃಢಿಕರಿಸಿ ವರದಿ ನೀಡಿರುತ್ತಾರೆ.

ದಿನಾಂಕ:-06-09-2005 ರಂದು ಈ ಪ್ರಾಧಿಕಾರದಿಂದ ಕರ್ನಾಟಕ ರಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ಪ್ರಕಾರ ಕಾರಣ ಕೇಳುವ ನೋಟಿಸನ್ನು ವಾಹನ ಮಾಲೀಕರಾದ ಶ್ರೀ ಮಲ್ಲಪ್ಪ ಬಸ್ಸಪ್ಪ ಮಸಳಿ ಬಿಜಾಪೂರ ಇವರಿಗೆ ಹೊರಡಿಸಲಾಯಿತು. ಸದರಿ ನೋಟಿಸನ್ನು ವಾಹನದ ಮಾಲೀಕರಿಗೆ ದಿನಾಂಕ:-17-09-2005 ರಂದು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ಇವರು ಜಾರಿ ಮಾಡಿರುತ್ತಾರೆ.

ದಿನಾಂಕ: -06-09-2005 ರಂದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ಕಲಂ 43(ಎ) ಪ್ರಕಾರ ಈ ಪ್ರಾಧೀಕಾರವು ದಿನಾಂಕ: 19-09-2005 ರಂದು ವಿಚಾರಣೆ ನಡೆಸಲಾಗುವುದೆಂದು ಎಲ್ಲ ಸಾಕ್ಷಿದಾರರಿಗೆ ಮತ್ತು ವಾಹನ ಮಾಲೀಕರಿಗೆ ನೋಟಿಸು ತೆಗೆಯಲಾಯಿತು.

ದಿನಾಂಕ:-19-09-2005 ರಂದು ವಿಚಾರಣೆಯನ್ನು ನಡೆಸಲಾಯಿತು ಅಭಿಯೋಗದ ಪರವಾಗಿ ಸಹಾಯಕ ಅಭಿಯೋಗದ ನಿರ್ದೇಶಕರು ಬಿಜಾಪೂರ ಇವರು ಹಾಜರಿ ಇದ್ದು ಅಭಿಯೋಗದ ಪರವಾಗಿ ಸಾಕ್ಷಿದಾರರಾದ ಪ್ರ.ಸಾ-1, ಪ್ರಾ.ಸಾ-2, ಪ್ರಾ.ಸಾ-3 ಪ್ರಾ.ಸಾ-4, ಇವರುಗಳ ವಿಚಾರಣೆ ಮಾಡಿ ನಾಲ್ಕು (4) ದಾಖಲಾತಿಗಳನ್ನು ಮತ್ತು ಎರಡು ಮುದ್ದೇಮಾಲುಗಳನ್ನು ಗುರುತಿಸಿದ್ದು ಇರುತ್ತದೆ.

ಪ್ರಾ.ಸಾ-1 ಇವರು ವಾಹನದ ಮಾಲೀಕರಾಗಿದ್ದು, ಇವರು ಸಾಕ್ಷಿ ನುಡಿಯುತ್ತಾ ಸದರಿ ಪ್ರಕರಣದಲ್ಲಿ ಜಪ್ತು ಪಡಿಸಲಾದ ಅಟೋರೀಕ್ಷಾ ಸಂ:ಕೆಎ-28-6469ನನ್ನ ಹೆಸರಿನಲ್ಲಿದ್ದು ಸದರಿ ವಾಹನವನ್ನು ದಿನಾಂಕ:-6-05-2003 ರಲ್ಲಿ ಅಲ್ಲಾಬಕ್ಷ ನಬಿಸಾಬ. ಕಲಾದಗಿ ಸಾ!!ಶಿಖಾರಖಾನೆ ಬಿಜಾಪೂರ ಇವರಿಗೆ ಮಾರಾಟ ಮಾಡಿರುತ್ತೇನೆ. ಆ ಸಂಬಂಧವಾಗಿ ತನ್ನ ಮತ್ತು ಅಲ್ಲಾಬಕ್ಷ ಕಲಾದಗಿ ಇಬ್ಬರ ನಡುವೆ ಆದ ಒಪ್ಪಂದದ ಮೇರೆಗೆ

ಕಾಗದವನ್ನು ತಯಾರಿಸಿ ನೋಟರಿ ಸಮಕ್ಷಮ ಧೃಡೀಕರಿಸಲಾಗಿದೆ. ಈಗಾಗಲೇ ಈ ಪ್ರಾಧೀಕಾರಕ್ಕೆ ಅದರ ನಕಲು ಧೃಡಿಕೃತ ಪ್ರತಿಯನ್ನು ತನ್ನ ಅರ್ಜಿಯೊಂದಿಗೆ ಹಾಜರಿಪಡಿಸಲಾಗಿರುತ್ತದೆ. ಈಗ ಆ ಪ್ರತಿಯನ್ನು ನಾನು ನೋಡುತ್ತಿದ್ದು ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ಇದನ್ನು ಮಾರಾಟ ಮಾಡಿದ ನಂತರ ಅಲ್ಲಾಬಕ್ಷ ಇವರ ಕಬ್ಜೆಯಲ್ಲಿ ಇರುತ್ತದೆ. ಸದರಿ ಆಟೋರೀಕ್ಷಾದಲ್ಲಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಮಾಡುವುದಕ್ಕೂ ನನಗೂ ಯಾವುದೇ ತರಹದ ಸಂಬಂಧ ಇರುವುದಿಲ್ಲಾ ಜಪ್ತುಮಾಡಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡರು ನನ್ನದು ಯಾವುದೇ ತರಹದ ತಕರಾರು ವಗೈರೆ ಇರುವುದಿಲ್ಲಾ ಅಂತಾ ಹೇಳಿಕೆ ನೀಡಿರುತ್ತಾರೆ.

ಪ್ರಾ.ಸಾ-2 ಇವರು ಸಾಕ್ಷಿ ನುಡಿಯುತ್ತಾ ದಿ: 04-06-2005 ರಂದು ರಾತ್ರಿ 8-00 ಗಂಟೆಗೆ ನಾನು ಮತ್ತು ನನ್ನ ಸಿಬ್ಬಂಧಿಯೊಂದಿಗೆ ಬಿಜಾಪೂರ ತಾಲೂಕಿನ ಹೊನಗನಹಳ್ಳಿ ರಸ್ತೆಯಲ್ಲಿರುವ ಜುಮುನಾಳ ಕ್ರಾಸ ಹತ್ತಿರ ರಸ್ತೆ ಕಾವಲು ಮಾಡುತ್ತಿರುವಾಗ, ಅತ್ತ ಕಡೆಯಿಂದ ಒಂದು ಆಟೋರೀಕ್ಷಾ ಬರುವುದು ಕಂಡು ಬಂತು, ಸದರಿ ಆಟೋರೀಕ್ಷಾ ತಡೆಯಲು ಪ್ರಯತ್ನಿಸಲಾಗಿ ಅದರಲ್ಲಿದ್ದ ವ್ಯಕ್ತಿಯು ನಮನ್ನು ಕಂಡುಕೊಡಲೇ ಆಟೋರೀಕ್ಷಾ ಬಿಟ್ಟು ಓಡಿ ಹೋದನು ಅವನನ್ನು ಹಿಡಿಯಲು ನಾವುಗಳು ಪ್ರಯತ್ನಿಸಿದರು ಕತ್ತಲಲ್ಲಿ ಸಿಕ್ಕಿರುವುದಿಲ್ಲಾ, ಆಗ ಸಮಯ ರಾತ್ರಿ 11-00 ಗಂಟೆ ಆಗಿತ್ತು ತದನಂತರ ನಾವು ಸದರಿ ಆಟೋರೀಕ್ಷಾ ಸಂಖ್ಯೆ: ಕೆಎ-28-6469ನ್ನು ಪರಿಶೀಲನೆ ಮಾಡಲಾಗಿ ಅದರಲ್ಲಿ ನಾಲ್ಕು ಪ್ಲಾಸ್ಟಿಕ್ ಚೀಲ ಇರುವುದು ಕಂಡು ಅದನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಕಳ್ಳಭಟ್ಟಿ ಸಾರಾಯಿ ಪಾಕೀಟ್‌ಗಳು ಇದ್ದವು. ಎಲ್ಲ ಪ್ಲಾಸ್ಟಿಕ್ ಚೀಲಗಳಲ್ಲಿಯ ಸಾರಾಯಿ ಪಾಕೀಟ್‌ಗಳನ್ನು ಎಣಿಕೆ ಮಾಡಿ ನೋಡಿಲಾಗಿ, ಅವು 100ಎಂಎಲ್‌ದ 800 ಪಾಕೀಟಗಳು ಇರುವುದು ಕಂಡುಬಂದಿರುತ್ತದೆ. ಆ ಸಮಯದಲ್ಲಿ ಯಾರು ಪಂಚ ಜನರು ದೊರಕದೇ ಇದ್ದುದ್ದರಿಂದ ಅಬಕಾರಿ ರಕ್ಷಕರುಗಳಾದ ಶ್ರೀ.ಎಂ.ವಿ.ಜಾಧವ ಮತ್ತು ಶ್ರೀ. ಎನ್‌.ಎ.ಬಾರಾಗಣಿ ಪಂಚರೆಂದು ಕಾರ್ಯನಿರ್ವಹಿಸಲು ವಿನಂತಿಸಲಾಗಿ ಅವರು ಅದಕ್ಕೆ ಒಪ್ಪಿಕೊಂಡರು ತದನಂತರ ನಾಲ್ಕು ಪ್ಲಾಸ್ಟಿಕ್ ಚೀಲಗಳಿಂದ ತಲಾ ಎರಡರಂತೆ ಒಟ್ಟು 8 ಕಳ್ಳಭಟ್ಟಿ ಸಾರಾಯಿ ಪಾಕೀಟ್‌ಗಳನ್ನು ರಸಾಯನ ಪರೀಕ್ಷೆಗಾಗಿ ತೆಗೆದುಕೊಂಡು ಶೀಲ ಮಾಡಿ ಪಂಚರ ಹಾಗೂ ನನ್ನ ಸಹಿ ಚೀಟಿಗಳನ್ನು ಅಂಟಿಸಿ ಮತ್ತು ಉಳಿದ ಮುದ್ದೇಮಾಲನ್ನು ಹಾಗೂ ಆಟೋರೀಕ್ಷಾವನ್ನು ಮುಂದಿನ ತನಿಖೆಗಾಗಿ ತಮ್ಮ ತಬಾಕ್ಕೆ ತೆಗೆದುಕೊಂಡು ಘಟನೆ ನಡೆದ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆ ಕ್ರಮ ಜರುಗಿಸಿ ಗುನ್ಹೆ ನಂ 01/2004-05 ನ್ನು ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ಮತ್ತು ಪಂಚಿನಾಮೆಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈಗ ಪಂಚನಾಮೆಯ ನಕಲನ್ನು ಹಾಗೂ ಪ್ರಥಮ ವರ್ತಮಾನದ ವರದಿಯ ನಕಲುನ್ನು ನೋಡುತ್ತಿದ್ದು, ಅವುಗಳು ಮೂಲ ಪ್ರತಿಯ ನಕಲು ಪ್ರತಿಗಳಾಗಿವೆ. ಅವುಗಳಲ್ಲಿ ಮಾಲು ಜಪ್ತ ಪಂಚನಾಮೆಯ ಪ್ರತಿಯನ್ನು ನಿಶಾನೆ-ಪಿ-2 ಮತ್ತು ಪ್ರಥಮ ವರ್ತಮಾನ ವರದಿಯನ್ನು ನಿಶಾನೆ-ಪಿ-3 ಎಂದು ಗುರುತಿಸಲಾಯಿತು, ಸದರಿ ಮಾಲು ಜಪ್ತ ಪಂಚನಾಮೆಯಲ್ಲಿರುವ ನನ್ನ ಸಹಿಯನ್ನು ನಿಶಾನೆ-ಪಿ-2 (ಎ) ಎಂದು ಗುರುತಿಸಲಾಯಿತು ಹಾಗೂ ಈ ಪ್ರಕರಣಕ್ಕೆ ಸಂಬಂಧಪಟ್ಟ ಎಲ್ಲಾ ಕಾಗದ ಪತ್ರಗಳನ್ನು ಮತ್ತು ಮುದ್ದೇಮಾಲುಗಳನ್ನು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ತಾಲ್ಲೂಕು ಶ್ರೀ.ಎಸ್.ಬಿ.ದೊಡ್ಡಮನಿ ಇವರಿಗೆ ಮುಂದಿನ ತನಿಖೆಗೋಸ್ಕರ ಹಸ್ತಾಂತರಿಸಿರುತ್ತೇನೆ. ಮತ್ತು ಮಾದರಿ ಪಾಕೀಟ್‌ಗಳು ಮತ್ತು ಆಟೋರೀಕ್ಷಾವನ್ನು ಈಗ ನೋಡುತ್ತಿದ್ದು ಅವುಗಳನ್ನು ಮುದ್ದೇಮಾಲ-1 ಮತ್ತು 2 ಎಂದು ಗುರುತಿಸಲಾಯಿತು. ಈಗ ಯಾರು ಪಾಟಿ ಸವಾಲ ಮಾಡಿರುವುದಿಲ್ಲಾ. ವಾಹನದ ಮಾಲೀಕರ ಹೇಳಿಕೆಯನ್ನು ಹಾಗೂ ಸಾಕ್ಷಿದಾರರ ಹೇಳಿಕೆಯನ್ನು ಪರಿಶೀಲಿಸಲಾಗಿ ಸದರಿ ವಾಹನ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಲ್ಲಿ ತೊಡಗಿರುವುದಕ್ಕೆ ಪುಷ್ಠಿ ನೀಡುತ್ತದೆ.

ಪ್ರಾ.ಸಾ-3 ಇವರು ಅಬಕಾರಿ ರಕ್ಷಕರಾಗಿದ್ದು ಪಂಚಸಾಕ್ಷಿದಾರರು ದೊರೆಯಿದ್ದರಿಂದ ಇವರೇ ಪಂಚರಾಗಿ ಕರ್ತವ್ಯ ನಿರ್ವಹಿಸಿ ಸಾಕ್ಷಿ ನುಡಿದಿದ್ದಾರೆ ಸದರಿ ಪಂಚ ಸಾಕ್ಷಿದಾರರ ಸಮ್ಮುಖದಲ್ಲಿ ಹೊನಗನಹಳ್ಳಿ ಜುಮನಾಳ ರಸ್ತೆಯಲ್ಲಿ ಜುಮನಾಳ ಕ್ರಾಸ ಹತ್ತಿರ ರಸ್ತೆ ಕಾವಲು ಮಾಡುತ್ತಿರುವಾಗ ರಾತ್ರಿ 11-00 ಗಂಟೆಗೆ ಹೊನಗನಹಳ್ಳಿ ಕಡೆಯಿಂದ ಒಂದು ಆಟೋರೀಕ್ಷಾ ಸಂ:ಕೆಎ 28-6469 ಬರುವುದನ್ನು ತೆಡೆಯಲಾಯಿತು, ಆ ಸಮಯದಲ್ಲಿ ಸದರಿ ಆಟೋರೀಕ್ಷಾ ಚಾಲಕನು ರೀಕ್ಷಾ ನಿಲ್ಲಿಸಿ ನಮಗೆ ಸಿಗದಂತೆ ಓಡಿ ಹೋದನು ಅವನನ್ನು ಹಿಡಿಯಲು ಪ್ರಯತ್ನ ಪಟ್ಟರು ಸಿಕ್ಕಿರುವುದಿಲ್ಲಾ ನಂತರ ಆಟೋರೀಕ್ಷಾ ತಪಾಸಣೆ ಮಾಡಿ ನೋಡಲಾಗಿ ಅದರಲ್ಲಿ ನಾಲ್ಕು ಪ್ಲಾಸ್ಟಿಕ್ ಚೀಲ ಇರುವುದು ಕಂಡು ಅದನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಕಳ್ಳಭಟ್ಟಿ ಸಾರಾಯಿ ಪಾಕೀಟಗಳು ಇದ್ದವು. ಎಲ್ಲ ಪ್ಲಾಸ್ಟೀಕ ಚೀಲಗಲ್ಲಿಯ ಸಾರಾಯಿ ಪಾಕೀಟಗಳನ್ನು ಎಣಿಕೆ ಮಾಡಿ ನೋಡಿಲಾಗಿ, ಅವು 100 ಎಂ ಎಲ್‌ದ 800 ಪಾಕೀಟಗಳು ಇರುವುದು ಕಂಡುಬಂದಿರುತ್ತದೆ. ಎಂದು ಸಾಕ್ಷಿ ನುಡಿದಿರುತ್ತಾರೆ. ಈ ಪಂಚಸಾಕ್ಷಿದಾರರ ಸಮ್ಮುಖದಲ್ಲಿ ರಸಾಯನಿಕ ವಿಶ್ಲೇಷಣೆಗಾಗಿ ಕಳ್ಳಭಟ್ಟಿ ಸಾರಾಯಿ ಪಾಕೀಟಗಳನ್ನು ಮಾದರಿಯಾಗಿ ತೆಗೆದಿದ್ದು ಹಾಗೂ ಸಾಕ್ಷಿದಾರರ ಸಹಿ ಮಾಡಿದ ಚೀಟಿಗಳನ್ನು ಅಂಟಿಸಿರುವುದನ್ನು ಕೂಡ ತಮ್ಮ ಸಾಕ್ಷಿಯಲ್ಲಿ ನುಡಿದಿರುತ್ತಾರೆ. ಅಬಕಾರಿ ಅಧಿಕಾರಿಗಳು ಈ ಸಾಕ್ಷಿದಾರನ ಸಮ್ಮುಖದಲ್ಲಿಯೇ ಪಂಚನಾಮೆಯನ್ನು ಬರೆದು ಸಾಕ್ಷಿದಾರನ ಸಹಿ ಪಡೆದಿರುತ್ತಾರೆಂದು ತಿಳಿಸಿರುತ್ತಾರೆ. ಪಂಚನಾಮೆಯಲ್ಲಿರುವ ಸಹಿಯನ್ನು ಗುರುತಿಸಿರುತ್ತಾರೆ. ಅದಕ್ಕೆ ನಿಶಾನೆ ಪಿ-2 (ಎ) ಎಂದು ಗುರುತಿಸಲಾಯಿತು. ವಾಹನ ಮತ್ತು ಕಳ್ಳಭಟ್ಟಿ ಸಾರಾಯಿ ಪಾಕೀಟ್‌ಗಳನ್ನು ಅಬಕಾರಿ ಅಧಿಕಾರಿಗಳು ಜಪ್ತ ಮಾಡಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಯಾರು ಪಾಟಿ ಸವಾಲು ಮಾಡಿರುವುದಿಲ್ಲಾ. ಪಂಚ ಸಾಕ್ಷಿದಾರನ ಸಾಕ್ಷಿಯನ್ನು ಪರಿಶೀಲಿಸಲಾಗಿ ಅಭಿಯೋಗದ ಪರವಾಗಿ ಪುಷ್ಠಿ ನೀಡಿರುವುದು ಕಂಡು ಬರುತ್ತದೆ.

ಪ್ರಾ.ಸಾ. -4 ಇವರು ಸಾಕ್ಷಿ ನುಡಿಯುತ್ತಾ ಅಬಕಾರಿ ಉಪ ನಿರೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ ಇವರಿಂದ ಮುಂದಿನ ತನಿಖೆಗಾಗಿ ವಾಹನ ಮತ್ತು ಕಳ್ಳಭಟ್ಟಿ ಸಾರಾಯಿ ಪಾಕೀಟ್‌ಗಳನ್ನು ಪಡೆದಿರುವುದಾಗಿ ತಿಳಿಸಿರುತ್ತಾರೆ. ಜಪ್ತ ಮಾಡಿದ ರಸಾಯನಿಕ ಮಾದರಿಗಳನ್ನು ರಸಾಯನಿಕ ವಿಶ್ಲೇಷಣೆಗಾಗಿ ರಸಾಯನಿಕ ತಜ್ಞರಿಗೆ ಕಳುಹಿಸಲಾಗಿ ರಸಾಯನಿಕ ತಜ್ಞರು ಸದರಿ ಕಳ್ಳಭಟ್ಟಿ ಸಾರಾಯಿ ಪಾಕೀಟ್ ಮಾದರಿಗಳಲ್ಲಿ ಮದ್ಯದ ಅಂಶವು ಇದ್ದು ಇದು ಮಾನವ ಸೇವನೆಗೆ ಯೋಗ್ಯ ಇರುವುದಿಲ್ಲಾ ಎಂದು ತಿಳಿಸಿರುತ್ತಾರೆ. ಎಂದು ಹೇಳಿಕೆ ನೀಡಿರುತ್ತಾರೆ. ಸದರಿ ರಸಾಯನಿಕ ತಜ್ಞರ ವರದಿಯ ಪ್ರತಿಯನ್ನು ನೋಡಿ ಗುರುತಿಸಿದರು ಅದಕ್ಕೆ ನಿಶಾನೆ ಪಿ-4 ಎಂದು ಗುರುತಿಸಲಾಗಿದೆ. ಸದರಿ ಸಾಕ್ಷಿದಾರರ ಹೇಳಿಕೆಯನ್ನು ಪರಿಶೀಲಿಸಲಾಗಿ ಸದರಿ ಆಟೋರೀಕ್ಷಾವು ಅಕ್ರಮವಾಗಿ ಕಳ್ಳಭಟ್ಟಿ ಸಾಗಾಣಿಕೆ ಮಾಡುತ್ತಿರುವುದಕ್ಕೆ ಪುಷ್ಠಿ ನೀಡುತ್ತದೆ.

ಮೇಲ್ಕಾಣಿಸಿದ ಅಂಶಗಳನ್ನು ಪರಿಶೀಲಿಸಲಾಗಿ ಸದರಿ ಆಟೋರೀಕ್ಷಾ ಸಂ:ಕೆಎ-28-6469ರಲ್ಲಿ ಕಳ್ಳಭಟ್ಟಿ ಸಾರಾಯಿ ಪಾಕೀಟಗಳನ್ನು ಸಾಗಾಣಿಕೆ ಮಾಡುತ್ತಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ಇವರು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿ ಸದರಿ ವಾಹನವು ತನ್ನದೆಂದು ಮಾಲೀಕತ್ವದ ಬಗ್ಗೆ ಯಾರು ಮುಂದೆ ಬಂದಿರುವುದಿಲ್ಲಾ, ಮತ್ತು ಸದರಿ ವಾಹನವನ್ನು ಕಛೇರಿಯ ಆವರಣದಲ್ಲಿ ನಿಲ್ಲಿಸಿರುವುದರಿಂದ ವಾತಾವರಣದ ವೈಪರೀತ್ಯದಿಂದ ಮೌಲ್ಯವನ್ನು ಕಳೆದುಕೊಳ್ಳುವ ಸಾಧ್ಯತೆಗಳು ಇರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ತಿಳಿಸಿರುತ್ತಾರೆ. ಮತ್ತು ರಸಾಯನಿಕ ತಜ್ಞರು ಸದರಿ ಪ್ರಕರಣದಲ್ಲಿ ಜಪ್ತ ಪಡಿಸಿದ ಭಟ್ಟಿ ಸಾರಾಯಿಯ ಪಾಕೀಟ್‌ಗಳು ಮದ್ಯಸಾರದ ಅಂಶವಿದ್ದು ಇದು ಮಾನವ ಸೇವೆನೆಗೆ ಯೋಗ್ಯ ಇರುವುದಿಲ್ಲಾ ಅಂತಾ ಧೃಢಪಡಿಸಿರುತ್ತಾರೆ. ಹಾಗೂ ವಾಹನದ ಮಾಲೀಕರ

ಹೇಳಿಕೆಯನ್ನು ಅನುಸರಿಸಿ ಮತ್ತು ಈ ಮೇಲಿನ ಅಂಶಗಳನ್ನು ಪರಿಶೀಲಿಸಿಲಾಗಿ ಸದರಿ ವಾಹನವನ್ನು ತಿಳುವಳಿಕೆಯಿಂದಲೇ ಕಾನೂನು ಬಾಹಿರ ಕೃತ್ಯದಲ್ಲಿ ಉಪಯೋಗಿಸಿರುತ್ತಾರೆಂದು ಭಾವಿಸಿರಬಹುದಾಗಿರುತ್ತದೆ. ಇನ್ನೂ ಮುಂದೆ ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ಹಿತದೃಷ್ಠಿಯಿಂದ ಅಟೋರೀಕ್ಷ ಸಂ:ಕೆಎ: 28:6469 ಮತ್ತು ಮೇಲ್ಕಾಣಿಸಿದ ಕಳ್ಳಭಟ್ಟಿ ಸಾರಾಯಿಯ ಪಾಕೀಟ್‌ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶದ ಸಂಖ್ಯೆ: ಇಎಕ್ಸ್‌ಇ:ಇ.ಐ.ಬಿ:ಡಿಟಿಸಿಆರ್:100/2005-06 ದಿನಾಂಕ: 24ನೇ ಅಕ್ಟೋಬರ್ 2005**

ಕೆ.ಆರ್.ಗೌಡ್ರ. ಪ್ರಾದೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ ಬಿಜಾಪೂರ ಜಿಲ್ಲೆ ಬಿಜಾಪೂರ ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43(ಎ) ಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ 43(ಬಿ) ರ ಅನ್ವಯ ಅನುಸರಿಸಬೇಕಾದ ಜರುಗಿಸಿದ ನಂತರ 43 (ಸಿ) ಅನ್ವಯ ಅಬಕಾರಿ ಉಪ ನಿರೀಕ್ಷಕರು ಇ.ಐ.ಬಿ ಬಿಜಾಪೂರ ಜಿಲ್ಲೆ ಇವರ ಮೊಕದ್ದಮೆ ಸಂಖ್ಯೆ:01/2004-05 ದಿನಾಂಕ: 04-06-2005 ರಲ್ಲಿ ವಶಪಡಿಸಿಕೊಂಡಿರುವ ಅಟೋರೀಕ್ಷಾ ಸಂ:ಕೆಎ-28-6469ನ್ನು ಮತ್ತು 800 ಕಳ್ಳಭಟ್ಟಿ ಸಾರಾಯಿಯ ಪಾಕೀಟ್‌ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಮೇಲೆ ತಿಳಿಸಿದ 100ಎಂಎಲ್‌ದ 800 ಕಳ್ಳಭಟ್ಟಿ ಸಾರಾಯಿಯ ಪಾಕೀಟ್‌ಗಳನ್ನು ಅಬಕಾರಿ ಉಪ ಅಧೀಕ್ಷಕರು ಬಿಜಾಪೂರ ವಿಭಾಗ ಇವರ ಸಮಕ್ಷಮ (ಶ್ಯಾಂಪಲ ಬಾಟಲಿಗಳನ್ನು ಹೊರತುಪಡಿಸಿ) ನಾಶಪಡಿಸಲು ಆದೇಶಿಸಿದೆ.

ಸದರಿ ಪ್ರಕರಣಕ್ಕೆ ಸಂಬಂಧಿಸಿದ ಆರೋಪಿತರ ಮೇಲೆ ದೋಷಾರೋಪಣೆ ಪಟ್ಟಿಯನ್ನು ನ್ಯಾಯಾಲಯದಲ್ಲಿ ಸಲ್ಲಿಸಲು ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ತಾಲೂಕು ಜಾರಿ ಮತ್ತು ತನಿಖೆ ಇವರಿಗೆ ಆದೇಶಿಸಿದೆ.

ಈ ಆದೇಶವನ್ನು ಇಂದು ದಿನಾಂಕ: 24-10-2005 ರಂದು ವಿಷಯ ನಿರ್ವಾಹಕರಿಗೆ ಉತ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚಿನ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

**ಕೆ.ಆರ್. ಗೌಡ್ರ**
ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ
ಬಿಜಾಪೂರ ಜಿಲ್ಲೆ. ಬಿಜಾಪೂರ.

**ಅನುಬಂಧ (1)**

**ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

| | | |
|---|---|---|
| ಪ್ರಾ. ಸಾ-2 | ಡಿ. ಎಸ್. ಚವ್ಹಾಣ,<br>ಅಬಕಾರಿ ಉಪ ನಿರೀಕ್ಷಕರು, ಇ.ಐ.ಬಿ. ಬಿಜಾಪೂರ ಜಿಲ್ಲೆ. | ತನಿಖಾಧಿಕಾರಿ |
| ಪ್ರಾ. ಸಾ-4 | ಎಸ್. ಬಿ. ದೂಟ್ಟಮನಿ,<br>ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬಿಜಾಪೂರ ತಾಲೂಕು | ತನಿಖಾಧಿಕಾರಿ |
| ಪ್ರಾ. ಸಾ-3 | ಎನ್.ಎ. ಬಾರಾಗಣಿ,<br>ಅಬಕಾರಿ ರಕ್ಷಕ, ಅಬಕಾರಿ ಅಧೀಕ್ಷಕರ ಇ.ಐ.ಬಿ. ರವರ<br>ಕಛೇರಿ ಬಿಜಾಪೂರ ಜಿಲ್ಲೆ. ಬಿಜಾಪೂರ | ಪಂಚರು |

**ಅನುಬಂಧ-(2)**

**ಫಿರ್ಯಾಧಿದಾರರ ಪರಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ-ಪಿ-2 | ಪಂಚನಾಮೆ |
| ನಿಶಾನೆ-ಪಿ-2(ಎ) | ಪ್ರಾ.ಸಾ-2 ರವರ ಸಹಿ |
| ನಿಶಾನೆ-3 | ಪ್ರಥಮ ವರ್ತಮಾನ ವರದಿ |
| ನಿಶಾನೆ-ಪಿ-4 | ರಸಾಯನಿಕ ತಜ್ಞರ ವರದಿಯ ಪ್ರತಿ |

**ಅನುಬಂಧ-(3)**

**ಫೀರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

1) ಎಂ.ಓ. -1 ವಾಹನ ನಂಬರ ಅಟೋರೀಕ್ಷಾ ಸಂ:ಕೆಎ:28:6469.
2) ಎಂ.ಓ. -2 ಮಾದರಿ ಕಳ್ಳಭಟ್ಟಿ ಸಾರಾಯಿ ಪಾಕೀಟ್‌ಗಳು

**ಅನುಬಂಧ-(4)**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು**

| | |
|---|---|
| ಪ್ರಾ.ಸಾ-1 | ಶ್ರೀ. ಮಲ್ಲಪ್ಪ ಬಸಪ್ಪ ಮಸಳಿ (ವಾಹನ ಮಾಲೀಕರು) |

**ಅನುಬಂಧ- (5)**

**ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು**

| | |
|---|---|
| ನಿಶಾನೆ-ಪಿ 1 | ನೋಂದಣಿ ಹಾಗೂ ಮುದ್ರಾಂಕ ಇಲಾಖೆ ಧೃಡೀಕರಣ ಪತ್ರ. |

**ಕೆ.ಆರ್. ಗೌಡ್ರ**
ಪಿ.ಆರ್. 1798
ಪ್ರಾಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ
ಬಿಜಾಪೂರ ಜಿಲ್ಲೆ. ಬಿಜಾಪೂರ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಭದ್ರಾವತಿ**
**ಸಂಖ್ಯೆ: ಎ3-ಸಿಓಎನ್ ಸಿಆರ್ 26/1988-89, ದಿನಾಂಕ:-9ನೇ ನವೆಂಬರ್ 2005**

**ನಿರೂಪಣಾಧಿಕಾರಿಗಳು:** ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ.
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

**ಪಿರ್ಯಾಧಿದಾರರು:** ವಲಯ ಅರಣ್ಯ ಅಧಿಕಾರಿ, ಚನ್ನಗಿರಿ ವಲಯ, ಭದ್ರಾವತಿ.

**ಅರ್ಜಿದಾರರು:** ಸತ್ನಾಂ ಸಿಂಗ್ ಬಿನ್ ಅಖಾರ್ ಸಿಂಗ್ ಮಾಲ್ಟಿ ಸಾಹೆಬ್ ಗ್ಯಾರೇಜ್ 8ನೇ ಕ್ರಾಸ್ ಸಿದ್ದಯ್ಯ ರೋಡ್, ಕೆಜಿಎನ್, ಬೆಂಗಳೂರು ಪಿ.ಎ. ಹೋಲ್ಡರ್ ಶ್ರೀ ಪರಮಜಿತ್ ಸಿಂಗ್ ಬಿನ್ ಮುಕ್ತಿಯರ್ ಸಿಂಗ್ ಲಾರಿ ಮಾಲೀಕರು.

**ಪ್ರಕರಣದ ಹಿನ್ನೆಲೆ:**

ದಿನಾಂಕ: 20-10-1988 ರಂದು ಶಾಂತಿಸಾಗರ ವಲಯದ ಅಜ್ಜಿಹಳ್ಳಿ ಹತ್ತಿರ ಶ್ರೀಗಂಧದ ಕಳ್ಳತನಮಾಡುವ ಬಗ್ಗೆ ವಲಯ ಅರಣ್ಯಾಧಿಕಾರಿ ಚನ್ನಗಿರಿ ಇವರಿಗೆ ವರ್ತಮಾನ ಬಂದಿದ್ದು, ಅವರು ಸಿಬ್ಬಂದಿಯೊಂದಿಗೆ ಹಾಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಅರಣ್ಯ ಸಂಚಾರಿದಳ, ಚನ್ನಗಿರಿ ಇವರೊಂದಿಗೆ ಬಾಡಿಗೆ ಕಾರನ್ನು ತೆಗೆದುಕೊಂಡು ಹೋಗಿ ಅಜ್ಜಿಹಳ್ಳಿ ಕೆರೆಯ ಹತ್ತಿರ ಹೋಗಿ ಕಾಯುತ್ತಿರುವಾಗ ದಿನಾಂಕ:-21-10-1988 ರಂದು ಬೆಳಿಗ್ಗೆ 4-30 ಕ್ಕೆ ಶಿವಮೊಗ್ಗ ಕಡೆಯಿಂದ ಚನ್ನಗಿರಿ ರಸ್ತೆ ಮಾರ್ಗವಾಗಿ ಒಂದು ಲಾರಿ ಬಂದು, ಹೊಲದ ಕಚ್ಚಾ ರಸ್ತೆಯ ಮೂಲಕ ಹೋಯಿತು. 1 ಗಂಟೆ ನಂತರ ಅಂದರೆ ಬೆಳಿಗ್ಗೆ 5-30 ರ ಸಮಯಕ್ಕೆ ಹೊಲದ ಕಚ್ಚಾ ರಸ್ತೆಯ ಮೂಲಕ ಮುಖ್ಯ ರಸ್ತೆಗೆ ಬಂದು ಚನ್ನಗಿರಿ ಮಾರ್ಗವಾಗಿ ಹೊರಟಿತು. ಸದರಿ ಲಾರಿಯನ್ನು ನಿಲ್ಲಿಸಲು ಸನ್ನೆ ಮಾಡಿದಾಗ ವಾಹನ ನಿಲ್ಲಿಸದೇ ಪರಾರಿಯಾಗಲು ಪ್ರಯತ್ನ ಪಟ್ಟಿದ್ದು, ನಂತರ ವಾಹನವನ್ನು ಬೆನ್ನಟ್ಟಿದಾಗ ಸದರಿ ವಾಹನವು ಸಂತೆಬೆನ್ನೂರು ಕ್ರಾಸ್ ಬಳಿ ನಿಲ್ಲಿಸಿ ಅದರಲ್ಲಿರುವ ಅಸಾಮಿಗಳು ಪರಾರಿಯಾಗಿರುತ್ತಾರೆ. ನಂತರ ವಾಹನ ಬಳಿ ಬಂದು ಪರಿಶೀಲಿಸಿದಾಗ ವಾಹನದ ಬಾಡಿ ಒಳಗಡೆ ಮುಕ್ಕಾಲು ಭಾಗ ಶ್ರೀಗಂಧದ ತುಂಡುಗಳು ಮತ್ತು ಶ್ರೀಗಂಧದ ಚಿಕ್ಕೆಚೂರುಗಳು ತುಂಬಿದ ಚೀಲಗಳು ಕಂಡುಬಂದವು. ಅವುಗಳನ್ನು ಪರಿಶೀಲಿಸಿದಾಗ ಸದರಿ ಶ್ರೀಗಂಧದ ತುಂಡುಗಳಿಗೆ ಗುರುತು ವಗೈರೆ ಕಂಡುಬಂದಿರುವುದಿಲ್ಲ ಹಾಗೂ ಈ ಬಗ್ಗೆ ಯಾವುದೇ ದಾಖಲಾತಿಗಳು ಸಿಕ್ಕಿದ ಕಾರಣ. ಅಕ್ರಮ ಸಾಗಾಣಿಕೆ ಎಂದು ಖಚಿತ ಪಡಿಸಿಕೊಂಡು. ಸದರಿ ಶ್ರೀಗಂಧದ ತುಂಡುಗಳನ್ನು ಲಾರಿಯಿಂದ ಕೆಳಗಿಳಿಸಿ ಎಣಿಕೆ ಮಾಡಲಾಗಿ ಒಟ್ಟು 771 ಶ್ರೀಗಂಧದ ತುಂಡುಗಳಿರುತ್ತದೆ ಹಾಗೂ ಶ್ರೀಗಂಧದ ಚಿಕ್ಕೆ ಚೂರುಗಳು 27 ಗೋಣಿ ಚೀಲಗಳಿರುತ್ತದೆ. ಶ್ರೀಗಂಧದ ತುಂಡುಗಳನ್ನು ಅಳತೆ ಮಾಡಿ 1 ರಿಂದ 771 ರ ವರೆಗೆ ಬಿಳಿ ಬಣ್ಣದಿಂದ ಸಂಖ್ಯೆ ನೀಡಿದ್ದು ಗೋಣಿ ಚೀಲಕ್ಕೆ 772 ರಿಂದ 798 ರ ವರೆಗಿನ ಕ್ರಮ ಸಂಖ್ಯೆ ನೀಡಿರುತ್ತಾರೆ. ನಂತರ ಚನ್ನಗಿರಿಯಿಂದ ತಕ್ಕಡಿ ತರಿಸಿ ತೂಕ ಮಾಡಲಾಗಿ ಒಟ್ಟು 3800 ಕೆಜಿ ಇರುತ್ತದೆ. ಲಾರಿಯನ್ನು ಪರಿಶೀಲಿಸಿದಾಗ ಲಾರಿ ಸಂಖ್ಯೆ ಡಿಇಎಲ್. 3969 ಆಗಿರುತ್ತದೆ. ನಂತರ ವಾಹನ ಹಾಗೂ ಶ್ರೀಗಂಧದ ತುಂಡುಗಳನ್ನು ವಶಪಡಿಸಿಕೊಂಡು ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಅರಣ್ಯ ಮೊಕ್ಕದ್ದಮೆ ಸಂಖ್ಯೆ 238/88 89ನ್ನು ದಾಖಲು ಮಾಡಿ ಮುಂದಿನ ಕ್ರಮಕ್ಕಾಗಿ ಚನ್ನಗಿರಿ ವಲಯ ಅರಣ್ಯಾಧಿಕಾರಿ ಕಛೇರಿ ಆವರಣಕ್ಕೆ ತೆಗೆದುಕೊಂಡು ಹೋಗಿರುತ್ತಾರೆ. ಮುಂದುವರೆದು ಪ್ರಕರಣದ ದಾಖಲಾತಿಗಳೊಂದಿಗೆ ಈ ನ್ಯಾಯಾಲಯದ ಸಮಕ್ಷಮ ಹಾಜರು ಪಡಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ನಿಯಮ 84,86,87 ಹಾಗೂ 71 ಎ ಮತ್ತು ಅರಣ್ಯ ಕಾನೂನು 1969 ನಿಯಮ 154,156 ಮತ್ತು 157 ರಂತೆ ಕ್ರಮ ಜರುಗಿಸಲು ಕೋರಿಕೊಂಡಿರುತ್ತಾರೆ. ಸದರಿ ದಾಖಲಾತಿಗಳನ್ನು ಪರಿಶೀಲಿಸಿ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ ಚನ್ನಗಿರಿ ವಲಯ ಚನ್ನಗಿರಿರವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ.

ದಿನಾಂಕ:-26-12-1988 ರಂದು ಅರಣ್ಯ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಲಾರಿ ಸಂಖ್ಯೆ ಡಿಇಎಲ್. 3969ರ ಮಾಲೀಕರಾದ ಶ್ರೀ ಪರಮಜಿತ್ ಸಿಂಗ್ ಇವರ ಜಿಪಿಎ ಸತ್ನಾಂ ಸಿಂಗ್ ದೆಹಲಿ ಇವರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ವಾಹನದಲ್ಲಿ ನಡೆದ ಅಪರಾಧಕ್ಕೆ ತನಗೂ ಸಂಬಂದ ಇರುವುದಿಲ್ಲ ಈ ಪ್ರಕರಣ ಹೇಗೆ ನೆಡೆಯಿತು ಎಂಬುದು ಸಹ ಗೊತ್ತಿಲ್ಲ, ವಾಹನದ ಚಾಲಕ ಅಥವಾ ಬೇರೆ ಯಾರಿಗೆ ಆಗಲೀ ವಾಹನದಲ್ಲಿ ಅರಣ್ಯ ಉತ್ಪನ್ನ ಸಾಗಿಸಲು ತಾನು ತಿಳಿಸಿರುವುದಿಲ್ಲ ಅರಣ್ಯ ಇಲಾಖೆಯಿಂದ ಯಾವುದೇ ತರಹದ ನೋಟೀಸ್ ವಗೈರೆ ಬಂದಿರುವುದಿಲ್ಲ. ಈ ಹಂತದಲ್ಲಿ ಈ ಬಗ್ಗೆ ಏನು ಹೇಳಲು ಸಾಧ್ಯಾವಿರುವುದಿಲ್ಲ ವಾಹನವು ಕಛೇರಿ ಬಯಲಿನಲ್ಲಿ ಚಲಿಸದೇಇದ್ದಲ್ಲಿ ಹಾಳಾಗುವ ಸಂಭವ ಇರುತ್ತದೆ. ಈ ಬಗ್ಗೆ ಸುಪ್ರೀಂ ಕೋರ್ಟ್ ಹಾಗೂ ರಾಜ್ಯ ಉಚ್ಚನ್ಯಾಯಾಲಯ ಸಹ ಆದೇಶ ಹೊರಡಿಸಿರುತ್ತವೆ. ಆದ್ದರಿಂದ ವಾಹನವನ್ನು ಬಾಂಡ್ ಆಧಾರದ ಮೇಲೆ ತಾತ್ಕಾಲಿಕ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ವಾಹನದ ಮಾಲೀಕರು ಎಂಬ ಬಗ್ಗೆ ಮೂಲ ಆರ್.ಸಿ ಪುಸ್ತಕ ಸಲ್ಲಿಸದ ಕಾರಣ ಮೂಲ ಆರ್. ಸಿ ಪುಸ್ತಕವನ್ನು ಸಲ್ಲಿಸಲು ದಿ:-25-2-1989 ರಂದು ಅರ್ಜಿದಾರರಿಗೆ ನೋಟೀಸ್ ನೀಡಿರುತ್ತದೆ. ವಾಹನದ ಮಾಲೀಕರು/ ಅರ್ಜಿದಾರರು ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ದಿ:-8-3-1989 ರಂದು ರಿಟ್ ಪಿಟಿಷನ್ 6692/1989 ನ್ನು ದಾಖಲಿಸಿ ವಾಹನವನ್ನು ವಶಪಡಿಸಿಕೊಂಡಿರುವುದು ಅರಣ್ಯ ಕಾಯಿದೆಗೆ ವಿರುದ್ಧವಾಗಿದೆ ವಾಹನವನ್ನು ಕೂಡಲೇ ಬಾಂಡ್ ಆಧಾರದ ಮೇಲೆ ಬಿಡುಗಡೆ ಮಾಡಲು ಕೋರಿಕೊಂಡಿರುತ್ತಾರೆ. ರಾಜ್ಯ ಉಚ್ಚ ನ್ಯಾಯಾಲಯವು ಅರ್ಜಿದಾರರ ಅರ್ಜಿಯನ್ನು ಪುರಸ್ಕರಿಸಿ ವಾಹನಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪಡೆದು ವಾಹನದ ಬಗ್ಗೆ ಆದಷ್ಟು ಜಾಗ್ರತೆಯಾಗಿ ಆದೇಶ ಹೊರಡಿಸಲು ದಿನಾಂಕ:-11-8-1989 ರಂದು ಆದೇಶಿಸಿರುತ್ತದೆ ದಿ:-14-9-1989 ರಂದು ವಾಹನದ ಮಾಲೀಕರಿಗೆ ವಾಹನಕ್ಕೆ ಸಂಬಂಧಿಸಿದ ಅಧಿಕೃತ ದಾಖಲಾತಿಗಳನ್ನು ಒಪ್ಪಿಸಲು ನೋಟೀಸ್ ನೀಡಿರುತ್ತದೆ. ದಿ:-6-10-1989 ರಂದು ವಾಹನಕ್ಕೆ ಸಂಬಂಧಿಸಿದ ಆರ್.ಸಿ ಜೇರಾಕ್ಸ್ ಪ್ರತಿ ಒಪ್ಪಿಸಿ ವಾಹನವನ್ನು ಬಿಡುಗಡೆ ಕೋರಿರುತ್ತಾರೆ ದಿ:-8-11-1989 ರಂದು ವಾಹನವನ್ನು 1.00 ಲಕ್ಷ ಬ್ಯಾಂಕ್ ಗ್ಯಾರಂಟಿ ಅಥವಾ ಎನ್.ಎಸ್.ಸಿ. ಅದೇ ಮೌಲ್ಯಕ್ಕೆ ಶೂರಿಟಿ ಬಾಂಡ್ ದಾಖಲಾತಿಗಳ ಸಮೇತ ಹಾಜರುಪಡಿಸಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆಯಲು ಸೂಚಿಸಿ ಈ ನ್ಯಾಯಾಲಯದಿಂದ ಆದೇಶ ಹೊರಡಿಸಿರುತ್ತದೆ, ವಾಹನದ ಮಾಲೀಕರು ಈ ನ್ಯಾಯಾಲಯದ ಆದೇಶದಂತೆ ರೂ 1.00 ಲಕ್ಷ ಬ್ಯಾಂಕ್ ಗ್ಯಾರಂಟಿ ನೀಡಿ ವಾಹನವನ್ನು ದಿ:-2 8-1991 ರಂದು ವಶಕ್ಕೆ ಪಡೆದಿರುತ್ತಾರೆ.

ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ವಿವಿಧ ದಿನಾಂಕಗಳಂದು ವಿಚಾರಣೆ ನೆಡೆಸಿರುತ್ತದೆ. ಅಭಿಯೋಜನೆವತಿಯಿಂದ ಆರೋಪಣೆಯನ್ನು ರುಜುವಾತುಪಡಿಸಲು ಒಟ್ಟು 2 ಸಾಕ್ಷಿದಾರರುಗಳನ್ನು ಹಾಜರು ಪಡಿಸಿ ವಿಚಾರಣೆ ಮಾಡಿರುತ್ತಾರೆ ಈ ಸಾಕ್ಷಿದಾರರು ಹೇಳಿಕೆ ಕೊಟ್ಟ ಸಂಗತಿಗಳಿಗೆ ಪುಷ್ಠಿ ನೀಡಿದ ದಾಖಲೆಗಳಿಂದು ಈ ಕೆಳಕಂಡಂತೆ ಗುರುತಿಸಲಾಗಿದೆ.

ನಿಶಾನೆ ಪಿ1 ಸ್ಥಳ ಮಹಜರ್
ನಿಶಾನೆ ಪಿ2 ಪ್ರಥಮ ಮಾಹಿತಿ ವರದಿ
ನಿಶಾನೆ ಪಿ3 ಸೀಜರ್ ರೀಪೋರ್ಟ್

ಅರ್ಜಿದಾರರ ನ್ಯಾಯಾವಾದಿಗಳು ಈ ಕೇಸಿನ ವಿಚಾರಣೆ ಸಂದರ್ಭದಲ್ಲಿ ಅರ್ಜಿದಾರರ ಪರವಾಗಿ ಯಾವುದೇ ದಾಖಲಾತಿಗಳನ್ನು ಅಥವಾ ಸಾಕ್ಷಿದಾರರನ್ನು ಹಾಜರುಪಡಿಸಿರುವುದಿಲ್ಲ ಹಾಗೂ ನ್ಯಾಯಾಲಯದಲ್ಲಿ ವಿಚಾರಣೆ ಸಮಯದಲ್ಲಿ ಅರ್ಜಿದಾರರ/ ವಾಹನ ಮಾಲೀಕರ ಹೇಳಿಕೆಯನ್ನು ಸಹ ದಾಖಲಿಸಿರುವುದಿಲ್ಲ ಅರ್ಜಿದಾರರು ನ್ಯಾಯಾಲಯದಿಂದ ವಿಚಾರಣೆಗೆ ಹಾಜರಾಗಲು ಹಲವಾರು ಬಾರಿ ಸೂಚಿಸಿದರೂ ಸಹ ಹಾಜರಾಗದೇ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುತ್ತಾರೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕುವ ಬಗ್ಗೆ ಈ ಕೆಳಕಂಡ ಅಂಶಗಳನ್ನು ಪರೀಕ್ಷಿಸುವುದು ಅವಶ್ಯವಾಗಿದೆ.

1. ಅರ್ಜಿದಾರರ ವಾಹನದ ಸಂಖ್ಯೆ ಲಾರಿ ಡಿಇಎಲ್. 3969 ರಲ್ಲಿ ಶ್ರೀಗಂಧದ ತುಂಡುಗಳು ಹಾಗೂ ಚಿಕ್ಕೆ ಚೂರುಗಳು ಸೇರಿ ಒಟ್ಟು 3800 ಕೆಜಿ. ಯನ್ನು ದಿ:-21-10-1988 ರಂದು ಅರಣ್ಯಕಾಯಿದೆ ಹಾಗೂ ಕಾನೂನಿಗೆ ವಿರುದ್ದವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧ ಎಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದಿಯೇ?
2. ಕರ್ನಾಟಕ ಅರಣ್ಯ ವಿಧಿ 71(ಬಿ) (1) ರ ಪ್ರಕಾರ ವಾಹನ ಮಾಲೀಕರವರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ಲಾರಿ ಮಾಲೀಕರು ಅಥವಾ ಅವರ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ಲಾರಿಯಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಶ್ರೀಗಂಧವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ ಹಾಗೂ ಲಾರಿಯು ಮಾಲೀಕರ ಅಥವಾ ಮಾಲೀಕರ ಪ್ರತಿನಿದಿಗಳ ಗಮನಕ್ಕೆ ಬಾರದಂತೆಯೇ ಲಾರಿಯನ್ನು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಕೆ ಉಪಯೋಗಿಸಲಾಗಿದೆಯೇ ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹೀರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಅವರ ಚಾಲಕರು ಅಥವಾ ಅವರ ಪ್ರತಿನಿದಿಗಳು ಸಾಕಷ್ಟು ಸೂಕ್ತ ಮುನ್ನಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?
4. ಆದೇಶವೇನು ?

**ಕಾರಣಗಳು**

**ಅಂಶ 1.**

ದಿನಾಂಕ:-20-10-88 ರಂದು ವಲಯ ಅರಣ್ಯಾಧಿಕಾರಿ ಚನ್ನಗಿರಿ ವಲಯ ಸಿಬ್ಬಂದಿಯರೊಂದಿಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಅರಣ್ಯ ಸಂಚಾರಿದಳ ಚನ್ನಗಿರಿರವರ ಜೊತೆಯಲ್ಲಿ ಖಚಿತ ವರ್ತಮಾನದ ಮೇರೆಗೆ ಸಂತೆಬೆನ್ನೂರು ಕ್ರಾಸ್ ಬಳಿ ಶ್ರೀಗಂಧದ ತುಂಡುಗಳು ಹಾಗೂ ಚಿಕ್ಕೆ ಚೂರುಗಳು ಸೇರಿ 3800 ಕೆಜಿ ಶ್ರೀಗಂಧ ತುಂಬಿ ಒಂದು ಲಾರಿ ಸಂಖ್ಯೆ ಡಿಇಎಲ್. 3969 ನ್ನು ವಶಪಡಿಸಿಕೊಂಡಿರುತ್ತಾರೆ ಈ ಸಂಬಂಧ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿ ಶ್ರೀಗಂಧದ ತುಂಡುಗಳ ಅಳತೆ ಮಾಡಿ ಕ್ರಮ ಸಂಖ್ಯೆ: ನೀಡಿ ತೂಕ ಮಾಡಿರುತ್ತಾರೆ, ಈ ಸಂಬಂಧ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿ ಅರಣ್ಯ ಮೊಕ್ಕದ್ದಮೆ ಸಂಖ್ಯೆ 238/88-89 ನ್ನು ದಾಖಲು ಮಾಡಿ ಅಮಾನತ್ತುಪಡಿಸಿಕೊಂಡಿರುತ್ತಾರೆ. ಈ ಸಂಬಂಧ ಪ್ರಥಮ ಮಾಹಿತಿ ವರದಿ ಸೀಜರ್ ರಿಪೋರ್ಟ್‌ಗಳನ್ನು ವರದಿಯೊಂದಿಗೆ ದಾಖಲಿಸಿ ಈ ನ್ಯಾಯಾಲಯದ ಸಮಕ್ಷಮ ವಾಹನವನ್ನು ಹಾಗೂ ಅರಣ್ಯ ಉತ್ಪನ್ನವನ್ನು ಹಾಜರುಪಡಿಸಿರುತ್ತಾರೆ. ಈ ನ್ಯಾಯಾಲಯವು ವಾಹನ ಹಾಗೂ ಶ್ರೀಗಂಧವನ್ನು ಪರಿಶೀಲಿಸಿ ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ ಚನ್ನಗಿರಿರವರ ವಶಕ್ಕೆ ದಿನಾಂಕ:-22-10-88 ರಂದು ನೀಡಿರುತ್ತದೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಅಭಿಯೋಜನೆವತಿಯಿಂದ ದಿ:-3-8-1990 ರಂದು ಶ್ರೀ ಎಂ.ಪಿ.ರುದ್ರಪ್ಪ ಬಿನ್ ಪರಬಯ್ಯ ವನಪಾಲಕ ಹೊನ್ನಾಳಿ ವಲಯ ಹಾಗೂ ದಿನಾಂಕ:-17-8-90 ಮತ್ತು ದಿ:-21-9-90 ರಂದು ಶ್ರೀ ಜೆ.ಬಿ.ನಾಯಕ್, ವಲಯ ಅರಣ್ಯಾಧಿಕಾರಿ ಚನ್ನಗಿರಿ ಇವರನ್ನು ಸಾಕ್ಷಿದಾರರನ್ನಾಗಿ ಮಾಡಿ ಸಾಕ್ಷ್ಯವನ್ನು ಪಡೆಯಲಾಗಿದ್ದು ಸದರಿ ಸಾಕ್ಷಿದಾರರು ವಿಚಾರಣೆ ಸಮಯದಲ್ಲಿ ದಿ:-20-10-88 ರಂದು ರಾತ್ರಿ 10-00 ಗಂಟೆಗೆ ಸಮಯದಲ್ಲಿ ಬಾಡಿಗೆ ಕಾರನ್ನು ತೆಗೆದುಕೊಂಡು ಅಜ್ಜಿಹಳ್ಳಿ ಕೆರೆಯ ಹತ್ತಿರ ಹೋಗಿ ಕಾಯುತ್ತಿರುವಾಗ ದಿ:-21-10-1988 ರಂದು ಬೆಳಗಿನ ಜಾವ 4-30 ರ ವೇಳೆಗೆ ಶಿವಮೊಗ್ಗ ಕಡೆಯಿಂದ ಚನ್ನಗಿರಿ ಕಡೆಗಿನ ಒಂದು ಲಾರಿ ಬಂದು ಎಡಬಾಗದ ಹತ್ತಿಯ ಹೊಲದ ಕಚ್ಚಾ ರಸ್ತೆಯಲ್ಲಿ ಹೋಯಿತು. ನಂತರ ಸ್ವಲ್ಪ ಪ್ರಮಾಣದ ನಂತರ ಅದೇ ಮಾರ್ಗವಾಗಿ ವಾಪಸ್ಸು ಮುಖ್ಯ ರಸ್ತೆಗೆ ಬಂದು ಹೊರಡುವಾಗ ಲಾರಿಯನ್ನು ನಿಲ್ಲಿಸಲು ಪ್ರಯತ್ನಿಸಿದಾಗ ಲಾರಿಯು ನಿಲ್ಲಿಸದೇ ವೇಗವಾಗಿ ಚನ್ನಗಿರಿ ಪಟ್ಟಣದೊಳಗೆ ಹೋದಾಗ ಅದನ್ನು ಬೆನ್ನಟ್ಟಿ ಬಂದಾಗ ವಾಹನವನ್ನು ಸಂತೆಬೆನ್ನೂರು ಕ್ರಾಸ್ ಬಳಿ ನಿಲ್ಲಿಸಿ ಆಸಾಮಿಗಳು ಪರಾರಿಯಾಗಿರುತ್ತಾರೆ. ವಾಹನ ಪರಿಶೀಲಿಸಿದಾಗ ವಾಹನ ಡಿಇಎಲ್. 3969 ಆಗಿರುತ್ತದೆ ವಾಹನದಲ್ಲಿ ಶ್ರೀಗಂಧದ ತುಂಡುಗಳು ಹಾಗೂ ಶ್ರೀಗಂಧದ ಚಿಕ್ಕೆ ಚೂರುಗಳ ಚೀಲಗಳು ಕಂಡುಬಂದವು ಅವುಗಳಿಗೆ ಯಾವುದೇ ಗುರುತು ವಗೈರೆ ಇಲ್ಲದ ಕಾರಣ ಅಕ್ರಮ ಎಂದು ಭಾವಿಸಿ ಅವುಗಳನ್ನು ಪಂಚರ ಸಮಕ್ಷಮ ಕೆಳಗಿಳಿಸಿ ಎಣಿಕೆ ಮಾಡಲಾಗಿ ಒಟ್ಟು 771 ಶ್ರೀಗಂಧದ ತುಂಡುಗಳಿರುತ್ತವೆ. ಅಲ್ಲದೇ 27 ಗೋಣಿಚೀಲದಲ್ಲಿ ಶ್ರೀಗಂಧದ ಚಿಕ್ಕೆ ಚುರುಗಳಿರುತ್ತದೆ. ಸದರಿ ತುಂಡುಗಳನ್ನು ಅಳತೆ ಮಾಡಿ ನಂ 1 ರಿಂದ 771 ಹಾಗೂ 27 ಗೋಣಿಚೀಲಕ್ಕೆ 772 ರಿಂದ 798 ರವರೆಗೆ ಕ್ರ ಸಂಖ್ಯೆ ನೀಡಿ ಶ್ರೀಗಂಧದ ತುಂಡುಗಳಿಗೆ ಇಲಾಖೆ ಛಾಪಾ (ಕೆ.ಎನ್.ಎಫ್.ಡಿ3 ಬಿಬಿ) ಎಂದು ಛಾಪಾ ಹಾಕಲಾಯಿತು ಲಾರಿಯನ್ನು ಹಾಗೂ ಶ್ರೀಗಂಧವನ್ನು ವಶಪಡಿಸಿಕೊಳ್ಳಲಾಯಿತು. ಸದರಿ ಲಾರಿಯಲ್ಲಿ ದಾಖಲಾತಿ ಸಿಕ್ಕಿರುವುದಿಲ್ಲ ಮಹಜರನ್ನು ಬೆಳಿಗ್ಗೆ 6 ಗಂಟೆಯಿಂದ 11-00 ಗಂಟೆಯವರೆಗೆ ಮಾಡಲಾಯಿತು ಸದರಿ ಮಹಜರನ್ನು ನಿಶಾನೆ ಪಿ1 ಎಂದು ಸಾಕ್ಷಿದಾರರ ಸಹಿಯನ್ನು ಕ್ರಮವಾಗಿ ನಿಶಾನೆ ಪಿ1ಎ ಮತ್ತು ಪಿ1ಬಿ ಎಂದು ಗುರುತಿಸಿಕೊಂಡಿರುತ್ತಾರೆ ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ2 ಹಾಗೂ ಸಾಕ್ಷಿದಾರರ ಸಹಿಯನ್ನು ಪಿ2ಎ ಎಂದು ಗುರುತಿಸಲಾಯಿತು ಸೀಜರ್ ರೀಪೋರ್ಟ್‌ನ್ನು ನಿಶಾನೆ ಪಿ3 ಹಾಗೂ ಸಾಕ್ಷಿದಾರರ ಸಹಿಯನ್ನು ನಿಶಾನೆ ಪಿ3ಎ ಎಂದು ಗಿರುತಿಸಲಾಯಿತು. ವಾಹನವನ್ನು ಈಗ ನೋಡಿದರೆ ಗುರುತಿಸುತ್ತೇನೆ ಎಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಕಂಡ ಪಿಡಬ್ಲ್ಯೂ 1 ಮತ್ತು 2 ರ ಸಾಕ್ಷಿದಾರರು ತಮ್ಮ ಪಾಟೀ ಸವಾಲಿನಲ್ಲಿ ಅರ್ಜಿದಾರರ ಪರ ವಕೀಲರು ಮಾಡಿದ ಸೂಚನೆಗೆ ಅಂದರೆ ಸ್ಥಳದಲ್ಲಿ ಮಹಜರ್ ಮಾಡಿಲ್ಲ ಆ ದಿನ ಲಾರಿಯಲ್ಲಿ ಯಾವುದೇ ಶ್ರೀಗಂಧದ ತುಂಡುಗಳು ಇರಲಿಲ್ಲ ಮಹಜರನ್ನು ಸೃಷ್ಟಿ ಮಾಡಿ ಸುಳ್ಳು ಕೇಸನ್ನು ಹಾಕಲಾಗಿದೆ ಅನ್ನುವುದನ್ನು ಸಂಪೂರ್ಣವಾಗಿ ಅಲ್ಲಗಳೆದಿರುತ್ತಾರೆ.

ಸಾಕ್ಷಿದಾರರು ನೀಡಿರುವ ಹೇಳಿಕೆಗಳು ಹಾಗೂ ಸ್ಥಳ ಮಹಜರ್, ಪ್ರಥಮ ಮಾಹಿತಿ ವರದಿ ಮತ್ತು ಸಿಜರ್ ರೀಪೋರ್ಟ್‌ಗಳಲ್ಲಿರುವ ಅಂಶಗಳು ಒಂದಕ್ಕೊಂದು ತಾಳೆ ಇದ್ದು ಹೊಂದಾಣಿಕೆ ಇರುತ್ತದೆ. ಸಾಕ್ಷಿದಾರರು ಸಂಶಯ ರಹಿತವಾಗಿ ಲಾರಿ ಸಂಖ್ಯೆ ಡಿಇಎಲ್. 3969 ರಲ್ಲಿ ಶ್ರೀಗಂಧದ ತುಂಡುಗಳು ಮತ್ತು ಚಿಕ್ಕೆ ಚೂರುಗಳು ಸಾಗಾಣಿಕೆ ಆಗಿರುವುದನ್ನು ರುಜುವಾತು ಪಡಿಸಿರುತ್ತಾರೆ ಹಾಗೂ ಕರ್ನಾಟಕ ಅರಣ್ಯ ಕಾಯಿದೆ 1963 ನಿಯಮ 84.86,87, ಮತ್ತು 71 ಎ ಹಾಗೂ ಅರಣ್ಯ ಕಾನೂನು 1969 ನಿಯಮ 144 & 145 ಉಲ್ಲಂಘನೆ ಮಾಡಿರುವುದು ದೃಢಪಟ್ಟಿರುತ್ತದೆ. ಆದ್ದರಿಂದ ಅಂಶ 1ನ್ನು ಹೌದು ಎಂದು ಉತ್ತರಿಸಲಾಗಿದೆ.

**ಅಂಶ-2:**

ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ಲಾರಿ ಡಿಇಎಲ್. 3969ರ ಮಾಲೀಕರಾದ ಪರಮಜಿತ್ ಸಿಂಗ್ ಬಿನ್ ಶ್ರೀ ಮುಕ್ತಿಯರ್ ಸಿಂಗ್ ರವರ ಜಿಪಿಎ ಹೋಲ್ಡರ್ ಶ್ರೀ ಸತ್ನಾಂ ಸಿಂಗ್ ಬೆಂಗಳೂರು ಇವರು ದಿ:-27-12-1988 ರಂದು ಈ ಪ್ರಾಧಿಕಾರದಲ್ಲಿ ವಾಹನವನ್ನು ಮಧ್ಯಂತರ ಸ್ವಾದೀನಕ್ಕೆ ಬಿಡುಗಡೆ ಮಾಡಲು ಕೋರಿ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ ಅರ್ಜಿದಾರರಿಗೆ ಅರಣ್ಯ ಕಾಯಿದೆ 1963 ಸೆಕ್ಷನ್ 71 (ಬಿ) ಪ್ರಕಾರ ಕಾರಣಕೇಳಿ ತಿಳುವಳಿಕೆ ಪತ್ರವನ್ನು ದಿ:-25-2-1989, ದಿ:-27-10-1989 ರಂದು ನೀಡಿರುತ್ತದೆ. ಅರ್ಜಿದಾರರು ಈ ಪ್ರಕರಣದ ಬಗ್ಗೆ ಕರ್ನಾಟಕ ರಾಜ್ಯ ಉಚ್ಚನ್ಯಾಯಾಲಯದಲ್ಲಿ ಅನೇಕ ಬಾರಿ ದಾವೆ ಹೂಡಿರುತ್ತಾರೆ, ಈ ನ್ಯಾಯಾಲಯವು ವಾಹನವನ್ನು ಕೆಲವೊಂದು ಷರತ್ತುಗಳನ್ನು ಹೊರಡಿಸಿ ತಾತ್ಕಾಲಿಕವಾಗಿ ಬಿಡುಗಡೆಮಾಡಿರುತ್ತದೆ, ಅಲ್ಲದೇ ವಾಹನದ ಮಾಲೀಕರಿಗೆ ಸಾಕಷ್ಟು ಬಾರಿ ನೋಟೀಸ್ ನೀಡಿ ವಿಚಾರಣೆಗೆ ಹಾಜರಾಗಲು ಮತ್ತು ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶ ನೀಡಿದ್ದು, ವಾಹನದ ಮಾಲೀಕರು ನ್ಯಾಯಾಲಯದ ನೋಟೀಸ್‌ಗಳನ್ನು ಪಡೆದಿದ್ದು ಸ್ವೀಕೃತಿಯನ್ನು ಸಹ ನೀಡಿರುತ್ತಾರೆ. ಆದ್ದರಿಂದ ಅಂಶ-2 ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-3:**

ಈ ಪ್ರಕರಣದಲ್ಲಿ ಅರ್ಜಿದಾರರಿಗೆ/ ವಾಹನದ ಮಾಲೀಕರಿಗೆ ಈ ನ್ಯಾಯಾಲಯದಲ್ಲಿ ವಿಚಾರಣೆಗೆ ಹಾಜರಾಗಲು ನೋಟೀಸ್ ನೀಡಿದರೂ ಸಹ ಅರ್ಜಿದಾರರು ಯಾವ ಒಂದು ವಿಚಾರಣೆಗೂ ಹಾಜರಾಗದೇ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುತ್ತಾರೆ. ವಾಹನದಲ್ಲಿ ಯಾವುದೇ ರೀತಿಯ ಅರಣ್ಯ ಉತ್ಪನ್ನ ಅಕ್ರಮ ಸಾಗಾಣಿಕೆ ಆಗಿರುವುದಿಲ್ಲ ಎಂಬ ಬಗ್ಗೆ ರುಜುವಾತುಪಡಿಸುವುದು ಅರಣ್ಯ ಕಾಯಿದೆ 71 ಬಿ ಪ್ರಕಾರ ವಾಹನದ ಮಾಲೀಕರ ಕರ್ತವ್ಯ ಆಗಿದ್ದು ವಾಹನದ ಮಾಲೀಕರು ನ್ಯಾಯಾಲಯಕ್ಕೆ ಹಾಜರಾಗದೇ ಗೈರು ಹಾಜರಾಗಿರುವ ಮೂಲಕ ಸದರಿ ವಾಹನ ಅರಣ್ಯ ಉತ್ಪನ್ನ ಅಕ್ರಮ ಸಾಗಾಣಿಕೆ ಆಗಿರುವುದಿಲ್ಲವೆಂಬುದನ್ನು ರುಜುವಾತು ಪಡಿಸುವಲ್ಲಿ ವಿಫಲರಾಗಿರುತ್ತಾರೆ. ಅರ್ಜಿದಾರರ ಪರ ವಕೀಲರಿಗೂ ಸಹ ಸಾಕಷ್ಟು ಸಮಯ ನೀಡಿ ಪ್ರಕರಣಕ್ಕೆ ಸಂಬಂಧಿಸಿದ ಕಕ್ಷಿದಾರರನ್ನು ಹಾಜರುಪಡಿಸಲು ಆದೇಶಿಸಿದರು ಸಹ ಅವರು ಸಹ ಗೈರು ಹಾಜರಾಗಿರುತ್ತಾರೆ.

ಈ ಮೇಲಿನ ವಿದ್ಯಾಮಾನಗಳನ್ನು ಅವಲೋಕಿಸಿ ನೋಡಿದಾಗ ಅರ್ಜಿದಾರರು / ವಾಹನದ ಮಾಲೀಕರು ಅವರ ತಿಳಿವಳಿಕೆಗೆ ಬಂದು ಈ ಕೃತ್ಯ ನಡೆದಿದೆ ಹಾಗೂ ವಾಹನದ ಮಾಲೀಕರು ಸಹ ಈ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಭಾಗವಹಿಸಿರುತ್ತಾರೆ ಎಂಬುದಕ್ಕೆ ಯಾವುದೇ ಸಂಶಯವಿರುವುದಿಲ್ಲ ಹಾಗೂ ಈ ವಾಹನವನ್ನು ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಅವರ ಚಾಲಕರು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುವುದಿಲ್ಲ ಆದ್ದರಿಂದ ಅಂಶ-3 ನ್ನು ಒಂದನೇ ಅಂಶಕ್ಕೆ ಹೌದು ಎಂದೂ ಹಾಗೂ 2 ಮತ್ತು 3ನೇ ಅಂಶಕ್ಕೆ ಇಲ್ಲ ಎಂದು ಉತ್ತರಿಸಲಾಗಿದೆ.

ಅಂಶ-4

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ ಈ ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಂಡಿರುತ್ತದೆ.

1. ಭದ್ರಾವತಿ ಅರಣ್ಯ ವಿಭಾಗದ ಚನ್ನಗಿರಿ ವಲಯ ಅರಣ್ಯಾಧಿಕಾರಿ, ಸಿಬ್ಬಂದಿಯವರು ಹಾಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ. ಅರಣ್ಯ ಸಂಚಾರಿದಳ ಚನ್ನಗಿರಿ ಇವರು ದಿ:-21-10-1988 ರಂದು ಅಮಾನತ್ತು ಪಡಿಸಿಕೊಂಡ ಲಾರಿ ಸಂಖ್ಯೆ: ಡಿಇಎಲ್. 3969 ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧದ ತುಂಡುಗಳು 771 ಹಾಗೂ 27 ಗೋಣಿಚೀಲ ಶ್ರೀಗಂಧದ ಚಿಕ್ಕೆ ಚೂರುಗಳು ಒಟ್ಟು 3800 ಕೆಜಿ ಸಾಗಾಣಿಕೆ ಆಗಿರುವುದು ಈ ನ್ಯಾಯಾಲಯಕ್ಕೆ ಫಿರ್ಯಾಧಿದಾರರು ಸಲ್ಲಿಸಿರುವ ಸ್ಥಳ ಮಹಜರ್ ಪ್ರಥಮ ಮಾಹಿತಿ ವರದಿ ಹಾಗೂ ಸೀಜರ್ ರೀಪೋರ್ಟ್‌ಗಳಿಂದ ತಿಳಿದು ಬಂದಿರುತ್ತದೆ ಹಾಗೂ ಈ ಬಗ್ಗೆ ಪಿಡಬ್ಲೂ-1 ಹಾಗೂ ಪಿಡಬ್ಲೂ 2 ಸಾಕ್ಷಿದಾರರು ನ್ಯಾಯಾಲಯಕ್ಕೆ ಹಾಜರಾಗಿ ಸಂಶಯರಹಿತವಾಗಿ ರುಜುವಾತು ಪಡಿಸಿರುತ್ತಾರೆ.
2. ಅರ್ಜಿದಾರರು/ ವಾಹನದ ಮಾಲೀಕರು ಅವರ ಗಮನಕ್ಕೆ ಬಾರದೇ ಈ ಮೇಲ್ಕಂಡ ಪ್ರಕರಣ ನಡೆದಿದೆ ಎಂಬುದಕ್ಕೆ ಯಾವುದೇ ಸಾಕ್ಷಿಗಳನ್ನು ಹಾಜರುಪಡಿಸಿರುವುದಿಲ್ಲ ಕರ್ನಾಟಕ ಅರಣ್ಯ ಕಾಯಿದೆ 1963 ರ 71(ಬಿ) ಪ್ರಕಾರ ನಾನು ತಪ್ಪತಸ್ಥರಲ್ಲ ಎಂಬುದನ್ನು ರುಜುವಾತು ಪಡಿಸುವ ಕರ್ತವ್ಯ ವಾಹನದ ಮಾಲೀಕರದಾಗಿರುತ್ತದೆ ಅವರು ಸಹ ನ್ಯಾಯಾಲಯಕ್ಕೆ ಹಾಜರಾಗದೇ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಲಾಗಿರುತ್ತದೆ ಆದ್ದರಿಂದ ವಾಹನ ಕಳ್ಳ ಸಾಗಾಣಿಕೆಯಲ್ಲಿ ಬಾಗಿ ಆಗಿರುವುದಕ್ಕೆ ಯಾವುದೇ ಸಂಶಯವಿರುವುದಿಲ್ಲ.
3. ಅರಣ್ಯ ಕಾಯಿದೆ 1963 ನಿಯಮ 71 (ಎ) ಯಿಂದ 71 (ಜಿ) ರಲ್ಲಿ ತಿಳಿಸಿರುವಂತೆ ಯಾವುದೇ ವಾಹನವು ಅರಣ್ಯ ಅಪರಾಧದಲ್ಲಿ ಅಕ್ರಮವಾಗಿ ತೊಡಗಿಸಿ ಹಾಗೂ ಅಂತಹ ಅಕ್ರಮ ಚಟುವಟಿಕೆಯಲ್ಲಿ ವಾಹನದ ಮಾಲೀಕರು ಹಾಗೂ ಅವರು ನೇಮಕ ಮಾಡಿದಂತಹ ವ್ಯಕ್ತಿಗಳು ಭಾಗಿಯಾಗಿದ್ದಾರೆ ಎಂಬುದು ಸ್ಪಷ್ಟವಾಗಿ ತಿಳಿದು ಬಂದಲ್ಲಿ ವಾಹನವನ್ನು ಏಕಪಕ್ಷೀಯವಾಗಿ ಸರ್ಕಾರಕ್ಕೆ ಮುಟ್ಟುಗೋಲುಮಾಡಿಕೊಳ್ಳಬಹುದಾಗಿದೆ. ಆದ್ದರಿಂದ ಅಂಶ 4 ಕ್ಕೆ ಈ ಕೆಳಗಿನಂತೆ ಆದೇಶ ನೀಡಲಾಗಿದೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ ಎಲ್ಲ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ, ಎ.ರಾಧಾದೇವಿ, ಭಾ.ಅ.ಸೇ. ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71-ಎ (2ನೇ ತಿದ್ದುಪಡಿ ಪ್ರಕಾರ) ಲಾರಿ ಸಂಖ್ಯೆ ಡಿಇಎಲ್. 3969 (ಚಾಸೀಸ್ ನಂ 344052813564

ಇಂಜಿನ್ ನಂ 02818486) ಮತ್ತು ಅದರಲ್ಲಿದ್ದ 771 ಶ್ರೀಗಂಧದ ತುಂಡುಗಳು ಮತ್ತು 27 ಗೋಣಿಚೀಲದಲ್ಲಿದ್ದ ಶ್ರೀಗಂಧದ ಚಿಕ್ಕೆ ಚೂರುಗಳ ಒಟ್ಟು 3800 ಕೆಜಿಯನ್ನು ಏಕಪಕ್ಷೀಯವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ ಹಾಗೂ ಸದರಿ ಶ್ರೀಗಂಧದ ತುಂಡುಗಳು ಚಿಕ್ಕೆ ಚೂರುಗಳನ್ನು ಇಲಾಖಾ ಕಾನೂನು ಪ್ರಕಾರ ವಿಲೇ ಮಾಡಲು ಆದೇಶಿಸಿದೆ. ಸದರಿ ವಾಹನವು ಎಲ್ಲಾ ಋಣಭಾರಗಳಿಂದ ಮುಕ್ತಾವಾಗಿದೆ.

ಆ ಆದೇಶವನ್ನು ದಿನಾಂಕ:-9-11-2005 ರಂದು ತೆರೆದ ನ್ಯಾಯಾಲಯದಲ್ಲಿ ಉಚ್ಚರಿಸಲಾಗಿದೆ. ಈ ಆದೇಶದಿಂದ 30 ದಿವಸಗಳ ಒಳಗೆ ವಾಹನದ ಮಾಲೀಕರು ಮೇಲ್ಮನವಿ ಸಲ್ಲಿಸದೇ ಇದ್ದರೇ ಇದೇ ಅಂತಿಮ ಆದೇಶವಾಗಿರುತ್ತದೆ.

**ಅನುಬಂಧ**

1. ಫಿರ್ಯಾದಿದಾರರ ಪರ ಸಾಕ್ಷಿಗಳ ವಿಚಾರಣೆ
1. ಪಿಡಬ್ಲ್ಯೂ 1 ಶ್ರೀ. ಎಂ.ಪಿ. ರುದ್ರಪ್ಪ ಬಿನ್ ಪರಬಯ್ಯ, ವನಪಾಲಕ, ಹೊನ್ನಾಳಿ ವಲಯ.
2. ಪಿಡಬ್ಲ್ಯೂ 2 ಶ್ರೀ ಜೆ.ಬಿ ನಾಯಕ್,ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿದಳ, ಕೋಲಾರ.

ಫಿರ್ಯಾಧಿದಾರರ ಪರ ದಾಖಲಾತಿಗಳ ಪರಿಶೀಲನೆ

1. ಪಿ1 ಸ್ಥಳ ಮಹಜರ್
2. ಪಿ1 ಎ ಪಿಡಬ್ಲ್ಯೂ 1 ಸಾಕ್ಷಿದಾರರ ಸಹಿ
3. ಪಿ1 ಬಿ ಪಿಡಬ್ಲ್ಯೂ 2 ಸಾಕ್ಷಿದಾರರ ಸಹಿ
4. ಪಿ2 ಪ್ರಥಮ ಮಾಹಿತಿ ವರದಿ
5. ಪಿ2ಎ ಫಿರ್ಯಾಧಿದಾರರ ಸಹಿ

ಎಕ್ಸ್ ಬಿಟ್-1 ಅರ್ಜಿದಾರರವಾಹನ ತಾತ್ಕಾಲಿಕ ಬಿಡುಗಡೆ ಅರ್ಜಿ

ಎಕ್ಸ್ ಬಿಟ್-2 ಮಧ್ಯಂತರ ಆದೇಶ ದಿ:-8-11-89

ಅರ್ಜಿದಾರರ ಪರ ದಾಖಲಾತಿಗಳ ಪರಿಶೀಲನೆ ಯಾವುದು ಇರುವುದಿಲ್ಲ.

**ಎ. ರಾಧಾದೇವಿ**

ಪಿ.ಆರ್. 1850

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:ಸಿಆರ್-75/2005-06, ದಿನಾಂಕ: 10ನೇ ನವೆಂಬರ್ 2005**

**ವಿಷಯ :** ಕಾರ್ಯವನ್ನು ನಿರ್ವಹಿಸದಂತೆ ಸ್ಥಗಿತಗೊಂಡಿರುವ ಬಂಗಾರಪೇಟೆ ತಾಲ್ಲೂಕು ಭಾರತ್ ಗೋಲ್ಡ್ ಮೈನ್ಸ್ ಯುನೈಟೆಡ್ ಎಂಪ್ಲಾಯೀಸ್ ಇಂಡಸ್ಟ್ರಿಯಲ್ ಕೋ-ಆಪರೇಟೀವ್ ಸೊಸೈಟಿ ನಿ., ಕೆ.ಜಿ.ಎಫ್. ಈ ಸಹಕಾರ ಸಂಘವನ್ನು ಋಣಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ: ಎಆರ್ 49 ಎಲ್‌ಕ್ಯೂಡಿ:ಸಿಆರ್:63:2005-06, ದಿನಾಂಕ: 7.11.2005.

**ಪ್ರಸ್ತಾವನೆ:**

ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರು ಭಾರತ್ ಗೋಲ್ಡ್ ಮೈನ್ಸ್ ಯುನೈಟೆಡ್ ಎಂಪ್ಲಾಯೀಸ್ ಇಂಡಸ್ಟ್ರಿಯಲ್ ಕೋ-ಆಪರೇಟೀವ್ ಸೊಸೈಟಿ ನಿ., ಕೆ.ಜಿ.ಎಫ್. ಬಂಗಾರಪೇಟೆ ತಾಲ್ಲೂಕು ಈ ಸಂಘವು ನೋಂದಣಿಯಾದ ದಿನಾಂಕದಿಂದ ಯಾವ ಕೆಲಸ ಕಾರ್ಯಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದು, ಸಂಘದ ಲೆಕ್ಕಪರಿಶೋಧನೆ, ಆಡಳಿತ ಮಂಡಳಿ ಸಭೆಗಳು ಮತ್ತು ವಾರ್ಷಿಕ ಮಹಾಸಭೆಗಳು ನಡೆಯದೆ ಇರುವುದಾಗಿಯೂ ಹಾಗೂ ಸಂಘದ ಕಾರ್ಯದರ್ಶಿ ಆಡಳಿತ ಮಂಡಳಿ ವಿವರಗಳು ಸಹ ಲಭ್ಯವಿರುವುದಿಲ್ಲ ವೆಂಬುದಾಗಿ ತಿಳಿಸುತ್ತಾ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಈ ಸಂಘವನ್ನು ಋಣಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಈ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ ಶ್ರೀ ಶಶಿಧರ ಎಲೆ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಭಾರತ್ ಗೋಲ್ಡ್ ಮೈನ್ಸ್ ಯುನೈಟೆಡ್ ಎಂಪ್ಲಾಯೀಸ್ ಇಂಡಸ್ಟ್ರಿಯಲ್ ಕೋ-ಆಪರೇಟೀಸ್ ಸೊಸೈಟಿ ನಿ., ಕೆ.ಜಿ.ಎಫ್. ಬಂಗಾರಪೇಟೆ ತಾಲ್ಲೂಕು ಈ ಸಂಘವನ್ನು ಋಣಸಮಾಪನೆಗೊಳಪಡಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿ ಒಂದು (1) ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ: 10.11.2005 ರಂದು ಹೊರಡಿಸಿದೆ.

ಪಿ.ಆರ್. 1840

**ಶಶಿಧರ ಎಲೆ**

ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.